# ಪಂಪ ಭಾರತ ಓದು

## ಪ್ರಥಮಾಶ್ವಾಸ



ಸಿ.ಪಿ.ನಾಗರಾಜ

# ಪಂಪ ಭಾರತ ಓದು

## ಪ್ರಥಮಾಶ್ವಾಸ

**ಸಿ.ಪಿ.ನಾಗರಾಜ**

**ನಾಗು ಸ್ಮಾರಕ ಪ್ರಕಾಶನ**
೭೫, 'ಎ' ಬ್ಲಾಕ್, ೫ ನೆಯ ಕ್ರಾಸ್, ಕ್ರಿಶ್ಣ ಗಾರ್ಡನ್
ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು–೫೬೦೦೫೯

**PAMPA BHARATHA ODU** : by C.P.Nagaraja.
Published by Nagu Smaraka Prakashana, 75, `A' Block, 5th Cross, Krishna Garden, R.V.College Post, Bengaluru-560059, Mobile: 9986347521.

First Edition : 2021

Page : 134

Price : Rs.140/-

Paper : 80gsm Ns Maplitho

Size : Demy 1/8

Copies : 500



ಪುಟಗಳು : 134

ಪ್ರತಿಗಳು : 500

ಬೆಲೆ : ರೂ. 140/-

ಮುಖಪುಟ ವಿನ್ಯಾಸ : ಎಂ.ಎಲ್.ಸೋಮವರದ, ಮಂಡ್ಯ
ಮೊ.9743512174, 8618580924

ಪ್ರತಿಗಳು ದೊರೆಯುತ್ತವೆ:

**ಮುನ್ನೋಟ ಪುಸ್ತಕ ಮಳಿಗೆ**
# 67, ಸೌತ್ ಅವೆನ್ಯೂ ಕಾಂಪ್ಲೆಕ್ಸ್
ಡಿವಿಜಿ ರಸ್ತೆ, ನಾಗಸಂದ್ರ ಸರ್ಕಲ್ ಬಳಿ
ಬಸವನಗುಡಿ, ಬೆಂಗಳೂರು-560004
ದೂರವಾಣಿ: 080-2660 3000

**ಆರ್. ಸುಧೀಂದ್ರ ಕುಮಾರ್**
# 9, 20 ನೆಯ ಮೈನ್, 3 ನೆಯ ಕ್ರಾಸ್
ವಿಜಯನಗರ 2 ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು-570017
ಮೊಬೈಲ್: 8892626269

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

# ಮುನ್ನುಡಿ

"ಇದು ನಿಚ್ಚಂ ಪೊಸತು ಅರ್ಣವಂಬೊಲ್ ಅತಿ ಗಂಭೀರಂ ಕವಿತ್ವಂ" ಎಂದು ಪಂಪನು ಆದಿಪುರಾಣ ಕಾವ್ಯದಲ್ಲಿ ಹೇಳಿರುವ ನುಡಿಗಳು ಜಗತ್ತಿನ ಎಲ್ಲಾ ಉತ್ತಮ ಸಾಹಿತ್ಯಕ್ಕೂ ಅನ್ವಯವಾಗುತ್ತವೆ. ಶ್ರೇಷ್ಠ ಸಾಹಿತ್ಯವು ತನ್ನ ಸಾರ್ವತ್ರಿಕ, ಸಾರ್ವಕಾಲಿಕ ಮತ್ತು ತತ್ಕಾಲೀನತೆಯ ಗುಣಗಳಿಂದ 'ನಿಚ್ಚಂ ಪೊಸತೇ' ಆಗಿರುತ್ತದೆ.

ನಮ್ಮ ಹಿಂದಿನ ಶ್ರೇಷ್ಠ ಸಾಹಿತಿಗಳಾದ ಬಿ.ಎಂ.ಶ್ರೀಕಂಠಯ್ಯನವರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು, ಕುವೆಂಪು ಅವರು, ಡಿ.ಎಲ್.ನರಸಿಂಹಾಚಾರ್ಯರು, ಎಲ್.ಬಸವರಾಜು ಅವರನ್ನು ಒಳಗೊಂಡಂತೆ ಇತ್ತೀಚಿನವರೆಗೂ ನೂರಾರು ಮಂದಿ ಹಳೆಗನ್ನಡ ಕಾವ್ಯಗಳ ಓದಿನ ಪ್ರಾಮುಖ್ಯತೆ ಬಗ್ಗೆ ಹೇಳುತ್ತಲೇ ಇದ್ದಾರೆ. ಹಳೆಗನ್ನಡ ಕಾವ್ಯದ ಪಠ್ಯವನ್ನು ಅದರ ಸ್ವರೂಪ ಕೆಡದಂತೆ ಎಲ್ಲರಿಗೂ ತಲುಪಿಸುವ ಮಾರ್ಗೋಪಾಯಗಳನ್ನು ಕುರಿತು ಚಿಂತಿಸುತ್ತಲೇ ಇದ್ದಾರೆ ಮತ್ತು ಕೆಲವರು ಹಲವು ಬಗೆಯ ಕೃತಿಗಳನ್ನು ರಚಿಸುತ್ತಿದ್ದಾರೆ.

ಸಿ.ಪಿ.ನಾಗರಾಜ ಅವರು ಪಂಪ ಮಹಾಕವಿಯ 'ವಿಕ್ರಮಾರ್ಜುನ ವಿಜಯಂ' ಅಥವಾ 'ಪಂಪ ಭಾರತಂ' ಎಂಬ ಕೃತಿಯ ಪ್ರಥಮ ಆಶ್ವಾಸದ ಕಾವ್ಯ ಪ್ರಸಂಗಗಳನ್ನು ನಾಟಕ ಪ್ರಕಾರಕ್ಕೆ ರೂಪಾಂತರಿಸಿ, ಪಂಪನ ಕಾವ್ಯವನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಓದುಗರಿಗೆ ನೆರವಾಗಿದ್ದಾರೆ. ಅವರ ಕೆಲಸ ಈ ಹೊತ್ತಿನ ಕಾಲದಲ್ಲಿ ಮೆಚ್ಚುವಂತಹುದು.

ಸಿ.ಪಿ.ನಾಗರಾಜು ಅವರು 'ಪಂಪ ಭಾರತ ಓದು' ಎಂಬ ಶೀರ್ಷಿಕೆಯಡಿಯಲ್ಲಿ ಎಂಟು ಪ್ರಸಂಗಗಳನ್ನು ನಾಟಕ ರೂಪದಲ್ಲಿ ಜೋಡಿಸಿದ್ದಾರೆ. ಪ್ರತಿಯೊಂದು ಪ್ರಸಂಗದಲ್ಲಿಯೂ ಮೂರು ಭಾಗಗಳಿವೆ.

1. ಪಂಪ ಭಾರತ ಪಠ್ಯದ ನಾಟಕ ರೂಪ.
2. ಪದ ವಿಂಗಡಣೆ ಮತ್ತು ತಿರುಳು.
3. ಪಂಪ ಭಾರತ ಪಠ್ಯ.

ಮೊದಲ ಭಾಗದಲ್ಲಿ ಪಂಪ ಭಾರತದ ಪಠ್ಯದ ರೂಪಾಂತರ ಮುಖ್ಯವಾದದ್ದು. ಇದು ನಾಟಕ ರೂಪದಲ್ಲಿದೆ. ಸಂಧಿ ಮತ್ತು ಸಮಾಸ ರೂಪದಲ್ಲಿದ್ದ ಪದಗಳನ್ನು ಅಗತ್ಯವಿರುವ ಕಡೆಗಳಲ್ಲಿ ವಿಂಗಡಿಸಿ ಬರೆದು, ಸಂಭಾಷಣಾ ಶೈಲಿಗೆ ಪರಿವರ್ತಿಸಲಾಗಿದೆ. ಇದನ್ನು ಓದಿದಾಗ ಮೂಲ ಪಠ್ಯವನ್ನು ಓದಿದ ಅನುಭವವೇ ಆಗುತ್ತದೆ. ಏಕೆಂದರೆ ಮೂಲ ಪಠ್ಯದ ಯಾವುದೇ ಪದವನ್ನು ಬದಲಾಯಿಸಿಲ್ಲ ಇಲ್ಲವೇ ಬಿಟ್ಟಿಲ್ಲ. ಪದ ವಿಂಗಡಣೆಯನ್ನು ಮಾಡಿ, ಪದಗಳ ತಿರುಳನ್ನು ತಿಳಿಸಿರುವುದು ವಿದ್ಯಾರ್ಥಿಗಳಿಗೆ, ಜನಸಾಮಾನ್ಯರಿಗೆ ಮತ್ತು ಸಂಶೋಧಕರಿಗೆ ಅನುಕೂಲವಾಗುವಂತಿದೆ. ನಾಟಕ ರೂಪ, ಪದ ವಿಂಗಡಣೆ ಮತ್ತು ತಿರುಳು ಹಾಗೂ ಮೂಲ ಪಠ್ಯಭಾಗ ಅನುಕ್ರಮವಾಗಿ ಒಂದೇ ಕಡೆ ದೊರೆಯುವುದರಿಂದ ಪಂಪ ಭಾರತದ ಕಾವ್ಯ ಪ್ರಸಂಗಗಳನ್ನು ಅದರ ಎಲ್ಲಾ ಸಾಧ್ಯತೆಗಳೊಂದಿಗೆ ಅರ್ಥೈಸಿಕೊಳ್ಳಲು ನೆರವಾಗುತ್ತದೆ. ಇಂತಹ ಕೃತಿಗಳು ಕನ್ನಡ ಪರಂಪರೆ, ಚರಿತ್ರೆ, ಸಂಸ್ಕೃತಿಯನ್ನು ತಿಳಿದುಕೊಳ್ಳಲು ಸಹಕಾರಿಯಾಗುತ್ತವೆ.

ಹಳೆಗನ್ನಡ ಕಾವ್ಯಗಳನ್ನು ಜನರಿಗೆ ತಲುಪಿಸಲೆಂದು ಮಹಾಕವಿ ರನ್ನನ ಗದಾಯುದ್ಧ ಕಾವ್ಯವನ್ನು ನಾಟಕ ರೂಪದಲ್ಲಿ ಅಳವಡಿಸಿದ ಬಿ.ಎಂ.ಶ್ರೀ ಅವರಿಂದ ಮೊದಲುಗೊಂಡು ನಮ್ಮ ಕನ್ನಡ ಲೇಖಕರು ಅನೇಕ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸುತ್ತಲೇ ಇದ್ದಾರೆ. ಈ ಹಾದಿಯಲ್ಲಿ ಸಿ.ಪಿ.ನಾಗರಾಜ ಅವರು 'ಪಂಪ ಭಾರತ ಓದು' ಕೃತಿಯ ಮೂಲಕ ಒಂದು ಹೆಜ್ಜೆಯನ್ನು ಇಟ್ಟಿದ್ದಾರೆ. ಇದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

**ಎಚ್. ದಂಡಪ್ಪ**
ಬೆಂಗಳೂರು

# ನನ್ನ ನುಡಿ

ಪಂಪ ಭಾರತದ ಕೆಲವು ಕಾವ್ಯ ಪ್ರಸಂಗಗಳನ್ನು ಗದ್ಯ ಮತ್ತು ಸಂಭಾಷಣೆಯ ರೂಪಕ್ಕೆ ಅಳವಡಿಸಿಕೊಂಡು ಓದಬೇಕೆಂಬ ಆಸೆಯಾಯಿತು. ಪ್ರಥಮ ಆಶ್ವಾಸದಿಂದ ಮತ್ಸ್ಯಗಂಧಿ ಪ್ರಸಂಗವನ್ನು ಸಿದ್ಧಪಡಿಸಿ, ಪದವಿಂಗಡಣೆ ಮತ್ತು ತಿರುಳನ್ನು ಬರೆದು ಗುರುಗಳಾದ ಕೆ.ವಿ.ನಾರಾಯಣ ಅವರಿಗೆ ತೋರಿಸಿದೆನು. ಪಂಪ ಭಾರತವನ್ನು ಓದಲು ಈ ಬಗೆಯ ಬರಹ ಉಪಯುಕ್ತವಾಗುವುದೆಂದು ಹೇಳಿ, ನನ್ನ ಬರಹದಲ್ಲಿದ್ದ ಅರೆಕೊರೆಗಳನ್ನು ತಿದ್ದಿ ಸರಿಪಡಿಸಿ ಮುಂದಿನ ಬರಹಗಳನ್ನು ಸಿದ್ಧಪಡಿಸುವಾಗ ಅನುಸರಿಸಬೇಕಾದ ವಿಧಾನಗಳನ್ನು ತಿಳಿಯಹೇಳಿ, ನನ್ನ ಬರವಣಿಗೆಗೆ ಮಾರ್ಗದರ್ಶನ ನೀಡಿದರು.

ಬರಹವನ್ನು ಆನ್ ಲೈನ್ ಮ್ಯಾಗಜೀನ್ 'ಹೊನಲು' ಮಿಂದಾಣಕ್ಕೆ (honalu.net) ಕಳುಹಿಸಿದೆನು. ಹೊನಲು ಮಿಂದಾಣದ ಸಂಪಾದಕ ವರ್ಗದವರು ಎಂಟು ಕಂತುಗಳಲ್ಲಿ ಬರಹವನ್ನು ಪ್ರಕಟಿಸಿದರು. ಈ ರೀತಿ ಬರಹ ರೂಪುಗೊಳ್ಳಲು ಗುರುಗಳಾದ ಕೆ.ವಿ.ನಾರಾಯಣ ಅವರ ಮಾರ್ಗದರ್ಶನ ಮತ್ತು ಹೊನಲು ಮಿಂದಾಣದ ಸಂಪಾದಕ ವರ್ಗ ಮತ್ತು ಓದುಗರು ನೀಡಿದ ಉತ್ತೇಜನವೇ ಕಾರಣವಾಗಿದೆ.

ಈ ಬರಹದ ಕರಡು ಪ್ರತಿಯನ್ನು ನನ್ನ ಗುರುಹಿರಿಯರು ಮತ್ತು ಗೆಳೆಯರಿಗೆ ಅಂಚೆ ಮೂಲಕ ಕಳುಹಿಸಿದ್ದೆನು. ಅದನ್ನು ಓದಿ ನೋಡಿ ಗುರುಗಳಾದ ಕೆ.ಮರುಳಸಿದ್ದಪ್ಪನವರು, ಹಿರಿಯರಾದ ಜಿ.ರಾಮಕೃಷ್ಣ ಅವರು ಮತ್ತು ಆತ್ಮೀಯರಾದ ಬಿ.ಎ.ಅನ್ನದಾನೇಶ್, ಹಾ.ತಿ.ಕೃಷ್ಣೇಗೌಡ, ಜಿ.ಎಮ್.ಕೃಷ್ಣಮೂರ್ತಿ, ಜಿ.ಕೃಷ್ಣಪ್ಪ, ಮೂಡ್ನಾಕೂಡು ಚಿನ್ನಸ್ವಾಮಿ, ಆರ್.ಚಲಪತಿ, ಚಂದ್ರಶೇಖರ ಆಲೂರು, ದೇವು ಪತ್ತಾರ್, ಜಿ.ಎನ್.ನರಸಿಂಹಮೂರ್ತಿ, ಸಿ.ಬಸವಲಿಂಗಯ್ಯ, ಎಸ್.ಬಸವರಾಜು, ಸಿ.ಎಚ್.ಭಾಗ್ಯ, ಮಹೇಶ್ ಹರವೆ, ರಂಗನಾಥ ಕಂಟನಕುಂಟೆ, ರಾಜಪ್ಪ ದಳವಾಯಿ, ಬಿ.ರಾಜಶೇಖರಪ್ಪ, ಕೆ.ಎ.ರಾಮರಾವ್, ಆರ್.ಲಕ್ಷ್ಮಿನಾರಾಯಣ, ಶಾರದ ಶೆಟ್ಟಿ, ಸುಗತ ಶ್ರೀನಿವಾಸರಾಜು, ಸುಬ್ರಹ್ಮಣ್ಯ ಸ್ವಾಮಿ, ಹನುಮಂತ–ಇವರೆಲ್ಲರೂ ಉತ್ತೇಜನದ ನುಡಿಗಳನ್ನಾಡಿದ್ದಾರೆ.

ಪದಗಳಿಗೆ ತಿರುಳು ಮತ್ತು ವಾಕ್ಯಗಳಿಗೆ ವಿವರಣೆಯನ್ನು ಬರೆಯುವಾಗ ಗುರು ಸಮಾನರಾದ ಡಿ.ಎನ್.ಶಂಕರ ಬಟ್ ಅವರು ಕನ್ನಡ ಬರಹದಲ್ಲಿ ಬಳಸಬೇಕಾದ ಲಿಪಿಗಳ ಬಗ್ಗೆ ಹೇಳಿರುವ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡಿದ್ದೇನೆ. ಗೆಳೆಯರಾದ ಎಚ್. ದಂಡಪ್ಪನವರು ಮುನ್ನುಡಿಯ ರೂಪದಲ್ಲಿ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಈ ಬರಹಗಳ ಮೊದಲ ಓದುಗಳಾಗಿ ನನ್ನ ಹೆಂಡತಿ ಗಾಯತ್ರಿ ತನ್ನ ಅನಿಸಿಕೆಯನ್ನು ತಿಳಿಸಿದ್ದಾಳೆ.

ಪಂಪ ಭಾರತ ಓದು ಮತ್ತು ಬರಹಕ್ಕೆ ನೆರವಾದ ಮೇಲ್ಕಂಡ ಗುರುಹಿರಿಯರಿಗೆ, ಸಂಪಾದಕ ವರ್ಗದವರಿಗೆ ಮತ್ತು ಗೆಳೆಯರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಪಂಪ ಭಾರತವನ್ನು ಓದುಗರು ಚೆನ್ನಾಗಿ ಗ್ರಹಿಸಿಕೊಳ್ಳಲು ನೆರವಾಗುವಂತಹ ಕೃತಿಗಳನ್ನು ರಚಿಸಿರುವ ಗುರು ಸಮಾನರಾದ ಡಿ.ಎಲ್. ನರಸಿಂಹಾಚಾರ್, ಅನಂತರಂಗಾಚಾರ್, ಎಲ್. ಬಸವರಾಜು, ಆರ್.ಎಲ್. ಅನಂತರಾಮಯ್ಯ ಮತ್ತು ಶಿವರಾಮಯ್ಯನವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಸಿ.ಪಿ. ನಾಗರಾಜ**
ಬೆಂಗಳೂರು

# ಪರಿವಿಡಿ

1. ಮತ್ಸ್ಯಗಂಧಿ ಪ್ರಸಂಗ / 10

2. ಅಂಬೆ ಪ್ರಸಂಗ / 26

3. ಧೃತರಾಷ್ಟ್ರ ಪಾಂಡು ವಿದುರ ಜನನ / 45

4. ಕರ್ಣನ ಜನನ / 62

5. ಕರ್ಣನ ಬೆಳವಣಿಗೆ / 77

6. ಶಾಪಕ್ಕೆ ಗುರಿಯಾದ ಪಾಂಡುರಾಜ / 92

7. ಕುಂತಿಯ ಬಯಕೆ / 109

8. ಗಾಂಧಾರಿಯ ಆತಂಕ / 121

## ಪಂಪ ಭಾರತ ಓದಿಗೆ ನೆರವಾದ ಪುಸ್ತಕಗಳು


1. ಎನ್.ಅನಂತರಂಗಾಚಾರ್
**ಪಂಪ ಮಹಾಕವಿ ವಿರಚಿತ ಪಂಪ ಭಾರತಂ ಗದ್ಯಾನುವಾದ**
(ಮರು ಮುದ್ರಣ: 2019)
ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ
ಚಾಮರಾಜ ಪೇಟೆ, ಬೆಂಗಳೂರು.

2. ಡಿ.ಎಲ್.ನರಸಿಂಹಾಚಾರ್
**ಪಂಪ ಭಾರತ ದೀಪಿಕೆ** (ಮುದ್ರಣ:1971)
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

3. ಆರ್.ಎಲ್. ಅನಂತರಾಮಯ್ಯ
**ಪಂಪ ಭಾರತ ಕಥಾಲೋಕ** (ಮುದ್ರಣ: 1971)
ಡಿ.ವಿ.ಕೆ.ಪ್ರಕಾಶನ, ಮೈಸೂರು.

4. ಎಲ್. ಬಸವರಾಜು
**ಪಂಪನ ಸಮಸ್ತ ಭಾರತ ಕಥಾಮೃತ** (ಮುದ್ರಣ:2000)
ಅಭಿರುಚಿ ಪ್ರಕಾಶನ, 14 ನೆಯ ಮುಖ್ಯ ರಸ್ತೆ, ಸರಸ್ವತೀಪುರ, ಮೈಸೂರು.

5. ಶಿವರಾಮಯ್ಯ
**ಪಂಪ ಭಾರತ ಸಂಪುಟ 1 ಮತ್ತು 2** (ಮುದ್ರಣ: 2018)
ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು.


+++

| | |
|---|---|
| **ಹೆಸರು:** | ಪಂಪ |
| **ಕಾಲ:** | ಕ್ರಿ.ಶ. 902 |
| **ತಾಯಿ:** | ಅಬ್ಬಣಬ್ಬೆ<br>ಅಣ್ಣಿಗೇರಿ, ನವಲುಗುಂದ ತಾಲ್ಲೂಕು, ಧಾರವಾಡ ಜಿಲ್ಲೆ,<br>ಕರ್ನಾಟಕ ರಾಜ್ಯ. |
| **ತಂದೆ:** | ಭೀಮಪಯ್ಯ<br>ವೆಂಗಿಪಳು, ವೆಂಗಿಮಂಡಲ.<br>ಈಗ ಇದು ಆಂಧ್ರ ಪ್ರದೇಶಕ್ಕೆ ಸೇರಿದೆ. |
| **ಕಸುಬು:** | ಕವಿ ಮತ್ತು ಕಲಿ |
| **ಆಶ್ರಯ:** | ಚಾಳುಕ್ಯ ಎರಡನೆಯ ಅರಿಕೇಸರಿಯ ಒಡ್ಡೋಲಗದಲ್ಲಿ ಕವಿ |
| **ರಚಿಸಿದ ಕಾವ್ಯಗಳು:** | 1. ಆದಿ ಪುರಾಣ<br>2. ವಿಕ್ರಮಾರ್ಜುನ ವಿಜಯ/ಪಂಪ ಭಾರತ |

# ೧. ಮತ್ಸ್ಯಗಂಧಿ ಪ್ರಸಂಗ

## ಪಾತ್ರಗಳು

| | |
|---|---|
| ಪರಾಶರ ಮುನಿ: | ಬ್ರಹ್ಮದೇವನ ಮೊಮ್ಮಗ. |
| ಮತ್ಸ್ಯಗಂಧಿ: | ದಾಶರಾಜನ ಸಾಕು ಮಗಳು. ಯೋಜನಗಂಧಿ ಮತ್ತು ಸತ್ಯವತಿ ಎಂಬ ಮತ್ತೆರಡು ಹೆಸರುಗಳು ಈಕೆಗೆ ಇದ್ದವು. |
| ವ್ಯಾಸ : | ಮತ್ಸ್ಯಗಂಧಿ ಮತ್ತು ಪರಾಶರ ಮುನಿಯ ಮಗ. |
| ಶಂತನು : | ಹಸ್ತಿನಾವತಿಯಲ್ಲಿ ನೆಲೆಸಿದ್ದ ಕುರುವಂಶದ ರಾಜ. ಗಂಗಾದೇವಿ ಮತ್ತು ಸತ್ಯವತಿ ಎಂಬುವರು ಈತನ ಇಬ್ಬರು ಹೆಂಡತಿಯರು. |
| ದಾಶರಾಜ : | ಯಮುನಾ ನದಿ ತೀರದಲ್ಲಿ ನೆಲೆಸಿದ್ದ ಬೆಸ್ತರ ಸಮುದಾಯದ ಒಡೆಯ. ಮೀನು ಹಿಡಿಯುವುದು ಮತ್ತು ದೋಣಿಯನ್ನು ನಡೆಸುವುದು ಬೆಸ್ತ ಸಮುದಾಯದ ಕಸುಬಾಗಿತ್ತು. |
| ಗಾಂಗೇಯ : | ಶಂತನು ಮತ್ತು ಗಂಗಾದೇವಿಯ ಮಗ. |

# ಮತ್ಸ್ಯಗಂಧಿ ಪ್ರಸಂಗ

ಒರ್ಮೆ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನ್ ಉತ್ತರಾಪಥಕ್ಕೆ ಪೋಗುತ್ತುಮ್ ಬಂದು ತೊಱೆಯ ತಡಿಯೊಳ್ ಓಡಮನ್ ನಡೆಯಿಸುವ ಮತ್ಸ್ಯಗಂಧಿಯನ್ ಕಂಡು.

**ಪರಾಶರ :** **ಎಮ್ಮನ್ ಈ ತೊಱೆಯಮ್ ಪಾಯಿಸು.**

**ಮತ್ಸ್ಯಗಂಧಿ :** **ಸಾಸಿರ್ವರ್ ಏಱುದೊಡಲ್ಲದೆ ಈ ಓಡಮ್ ನಡೆಯದು.**

**ಪರಾಶರ:** **ಅನಿಬರ ಬಿಣ್ಪುಮ್ ಆಮ್ ಅಪ್ಪೆಮ್ ಏಱಿಸು.**

**ಮತ್ಸ್ಯಗಂಧಿ:** **ಅಂತೆ ಗೆಯ್ವೆನ್.**

(ಎಂದು ಓಡಮ್ ಏಱಿಸಿ ನಡೆಯಿಸುವಲ್ಲಿ ಮುನೀಂದ್ರನ್ ದಿವ್ಯಕನ್ಯೆಯನ್ ಅೞ್ಕಿರ್ತು ನೋಡಿ, ಮನದೊಳ್ ಸೋಲ್ತು, ಆಕೆಯ ಒಡಲ ಈ ದುರ್ಗಂಧ ಪೋಪಂತೆ ಯೋಜನ ಗಂಧಿತ್ವಮನ್ ಇತ್ತು, ಮಂಜನ್ ಕಾಂಡಪಟದಂತೆ ಇರ್ಪನ್ನೆಗಮ್ ಮಾಡಿ, ಅಲಂಪು ಅೞ್ಕಱಿನ್ ಈಯೆ ಕೂಡುವ ಎಡೆಯೊಳ್ ಮಹಾ ಮುನಿಪನ್ ಜ್ಞಾನಸ್ವರೂಪನ್ ಪುಟ್ಟಿದನ್. ದಿವ್ಯಮುನಿಗಳ್ಗೆ ಏಗೆಯ್ದೊಡಂ ತೀರದೇ...

ಅಂತು ನೀಲಾಂಬುದ ಶ್ಯಾಮನುಮ್, ಕನಕ ಪಿಂಗಳ ಜಟಾಬಂಧ ಕಳಾಪನುಮ್, ದಂಡ ಕಪಾಳಹಸ್ತನುಮ್, ಕೃಷ್ಣಮೃಗ ತ್ವಕ್ಪರಿಧಾನನುಮ್ ಆಗೆ ವ್ಯಾಸಭಟ್ಟಾರಕನ್ ಪುಟ್ಟುವುದುಮ್, ಪರಾಶರನ್ ಸತ್ಯವತಿಗೆ ಪುನಃ ಕನ್ಯಾಭಾವಮನ್ ದಯೆಗೆಯ್ದು ಆತನನ್ ಒಡಗೊಂಡ ಪೋದನ್.

ಇತ್ತಲ್ ಒರ್ಮೆ ಶಂತನು ಮೃಗಯಾವ್ಯಾಜದಿನ್ ತೊೞಲ್ತರ್ಪನ್, ತನ್ಮೃಗಶಾಬಾಕ್ಷಿಯ ಕಂಪು ಪಳಂಚಲ್ಕೆ ತಟ್ಟಿ, ಮಧುಪಂಬೋಲ್ ಸೋಲ್ತು ಕಂಡು ನಲ್ಮೆಗೆ ಒಲ್ದು, ದಿಬ್ಯಮ್ ಪಿಡಿವಂತೆವೋಲ್ ಪಿಡಿದು)

**ಶಂತನು:** **ನೀನ್ ಬಾ ಪೋಪಮ್.**

(ಎಂದಂಗೆ ತತ್ಕನ್ಯಕೆ ನಾಣ್ಚಿ ಮೆಲ್ಲಗೆ...)

**ಸತ್ಯವತಿ:** **ಬೇಡುವೊಡೆ ನೀವ್ ಎಮ್ಮಯ್ಯನಂ ಬೇಡಿರೇ.**

(ಎಂಬುದುಮ್ ಶಂತನು ಪೊಟಿಲ್ಗೆ ಮಗುಳ್ದು ವಂದು ಅವರಯ್ಯನಪ್ಪ ದಾಶರಾಜನಲ್ಲಿಗೆ ಕೂಸನ್ ಬೇಡೆ ಪೆರ್ಗಡೆಗಳನ್ ಅಟ್ಟಿದೊಡೆ..)

**ದಾಶರಾಜ:** **ದೊರೆಯ ಪಿರಿಯ ಮಗನುಮ್ ಗಾಂಗೇಯನ್ ಕ್ರಮ ಕ್ರಮಾರ್ಹನುಮ್ ಇರ್ದಂತೆ ಎನ್ನ ಮಗಳನ್ ಕುಡೆವು. ಎಮ್ಮ ಮಗಳ್ಗೆ ಪುಟ್ಟಿದಾತನ್ ಪಿರಿಯ ಮಗನುಮ್ ಕ್ರಮಕ್ಕೆ ಅರ್ಹನುಮ್ ರಾಜ್ಯಕ್ಕೆ ಒಡೆಯನುಮ್ ಅಪ್ಪೊಡೆ ಕುಡುವೆಮ್.**

(ಎನೆ ತದ್ ವೃತ್ತಾಂತಮನ್ ಮಂತ್ರಿಗಳಿನ್ ಶಂತನು ಕೇಳ್ದು..)

**ಶಂತನು:** (ತನ್ನಲ್ಲಿಯೇ)

**"ಕ್ರಮಮಮ್ ವಿಕ್ರಮದಿಂದೆ ತಾಳ್ದುವ ಮಗನ್ ಗಾಂಗೇಯನ್ ಇರ್ದಂತೆ ನೋಡ, ಮರುಳ್ ಶಂತನು ತನ್ನದೊಂದು ಸವಿಗಮ್ ಸೋಲಕ್ಕಮ್ ತನ್ನಯ ಬೇಟದಾಕೆಯ ಮಗಂಗೆ ನಿಜಕ್ರಮಮನ್ ಇತ್ತನ್" ಎಂಬ ಒಂದು ಅಪಖ್ಯಾತಿ ಲೋಕಮನ್ ಆವರ್ತಿಸೆ ಬಳ್ದೊಡೆ ಎನ್ನ ಕುಲಮುಮ್ ತಕ್ಕೂರ್ಮೆಯುಮ್ ಮಾಸದೇ..**

(ಎಂದು ತನ್ನ ನಾಣ್ಗಾಪನೆ ಬಗೆದು, ಅತನು ಪರಿತಾಪಿತ ಶರೀರನುಮಾಗಿ ಶಂತನು ಕರಂಗಿ ಎರ್ದೆಗಿಡೆ, ತದ್ ವೃತ್ತಾಂತಮೆಲ್ಲಮಂ ಗಾಂಗೇಯನ್ ಅಱಿದು..)

**ಗಾಂಗೇಯ:** (ತನ್ನಲ್ಲಿಯೇ)

**ನೃಪತಿ ಬೇಡಿದುದನ್ ಕುಡಲೊಲ್ಲಂದು ಅಂಗಜೋತ್ಪನ್ನ ವಿಮೋಹದಿಂದ ಅಟಿದಪನ್. ಎನ್ನಯ ದೂಸಱಿನ್ ಪತಿ ಸತ್ತೊಡೆ ಸತ್ತ ಪಾಪಮ್ ಎನ್ನನ್ ನರಕಂಗಳೊಳ್ ತಡೆಯದೆ ಅಟ್ಟುಗುಮ್..**

**ಪೋ ಏವುದು ರಾಜ್ಯಲಕ್ಷ್ಮಿ... ತನ್ನಯ ತಂದೆ ಎಂದುದನೆ ಕೊಟ್ಟು ವಿವಾಹಮನ್ ಇಂದೆ ಮಾಡುವೆನ್.**

(ಎಂದು ನಿಶ್ಚಯಿಸಿ ಗಾಂಗೇಯನ್ ದಾಶರಾಜನಲ್ಲಿಗೆ ವಂದು...)

**ಗಾಂಗೇಯ:** **ಈ ನಿಜ ತನೂಜೆಯನ್ ನೀಡಿರದೆ ಈವುದು. ಈ ವಧೂಗೆ ಆದ**

**ಪುತ್ರರೊಳ್ ರಾಜ್ಯಲಕ್ಷ್ಮಿ ಕೂಡುಗೆ. ಅಂತು ಅದು ಎನಗೆ ಮೊಱೆಯಲ್ತು. ನಿಕ್ಕುವವ್, ಇಂದು ಮೊದಲಾಗಿರೆ ಪೆಂಡಿರ್ ಎಂಬರೊಳ್ ಕೂಡುವನಲ್ಲೆನ್ .**

(ಎಂದು ಆತನ ಮನದ ತೊಡರ್ಪನ್ ಪಿಂಗೆ ನುಡಿದು, ನದೀಸುತನ್ ಸತ್ಯವತಿಯನ್ ಉಯ್ದು ರಾಗದಿಮ್ ಪತಿಯೊಳ್ ಸತಿಯನ್ ಕೂಡಿದನ್.)

✦

## ಮತ್ಸ್ಯಗಂಧಿ ಪ್ರಸಂಗ
## ಪದಗಳ ವಿಂಗಡಣೆ ಮತ್ತು ತಿರುಳು

ಒರ್ಮೆ=ಒಂದು ದಿನ; ಮೊಮ್ಮನ್+ಅಪ್ಪ; ಮೊಮ್ಮ=ಮೊಮ್ಮಗ; ಮೊಮ್ಮಗ=ಮಗಳ ಇಲ್ಲವೇ ಮಗನ ಮಗ; ಅಪ್ಪ=ಆಗಿದ್ದ ; ವೃದ್ಧ=ಹಿರಿಯ; ಮುನಿ+ಇಂದ್ರನ್; ಮುನಿ=ರಿಸಿ; ಇಂದ್ರ=ಒಡೆಯ; ಮುನೀಂದ್ರ=ದೊಡ್ಡ ಮುನಿ; ಉತ್ತರಾ+ಪಥಕ್ಕೆ; ಉತ್ತರ=ಒಂದು ದಿಕ್ಕಿನ ಹೆಸರು; ಪಥ=ದಾರಿ; ಉತ್ತರಾಪಥ=ವಿಂಧ್ಯ ಪರ್ವತದಿಂದ ಉತ್ತರ ದಿಕ್ಕಿನ ಭಾಗದಲ್ಲಿರುವ ದೇಶ; ಪೋಗು=ಹೋಗು;

**ಒರ್ಮೆ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನ್ ಉತ್ತರಾಪಥಕ್ಕೆ ಪೋಗುತ್ತುಮ್ ಬಂದು**=ಒಂದು ದಿನ ಬ್ರಹ್ಮನ ಹಿರಿಯ ಮೊಮ್ಮಗನಾದ ಪರಾಶರ ಮುನಿಯು ಉತ್ತರ ದಿಕ್ಕಿನತ್ತ ಇರುವ ದೇಶಕ್ಕೆ ಪಯಣಿಸುತ್ತ ಯಮುನಾ ನದಿಯ ತೀರಕ್ಕೆ ಬಂದು;

ತೊಱೆ=ನದಿ; ತಡಿ+ಒಳ್; ತಡಿ=ದಂಡೆ; ಒಳ್=ಅಲ್ಲಿ; ಓಡಮ್+ಅನ್; ಓಡ=ದೋಣಿ; ಅನ್=ಅನ್ನು; ನಡೆ=ಸಾಗು; ಮತ್ಸ್ಯ=ಮೀನು; ಗಂಧ=ವಾಸನೆ; ಮತ್ಸ್ಯಗಂಧ=ಮೀನಿನ ವಾಸನೆಯಿಂದ ಕೂಡಿರುವುದು; ಮತ್ಸ್ಯಗಂಧಿ=ದಾಶರಾಜನ ಮಗಳು. ಈಕೆಯು ಅಂಬಿಗಳಾಗಿ ದೋಣಿಯನ್ನು ನಡೆಸುವ ಕಸುಬನ್ನು ಮಾಡುತ್ತಿದ್ದಳು; ಕಂಡು=ನೋಡಿ;

**ತೊಱೆಯ ತಡಿಯೊಳ್ ಓಡಮನ್ ನಡೆಯಿಸುವ ಮತ್ಸ್ಯಗಂಧಿಯನ್ ಕಂಡು** =ನದಿಯ ದಂಡೆಯಲ್ಲಿ ದೋಣಿಯನ್ನು ನಡೆಯಿಸುವ ಮತ್ಸ್ಯಗಂಧಿಯನ್ನು ನೋಡಿ;

ಎಮ್ಮನ್=ನಮ್ಮನ್ನು; ತೊರೆ+ಅಮ್; ಅಮ್=ಅನ್ನು; ಪಾಯಿಸು=ದಾಟಿಸು; **ಎಮ್ಮನ್ ಈ ತೊಱೆಯವ್ ಪಾಯಿಸು**=ನಮ್ಮನ್ನು ಈ ನದಿ ದಾಟಿಸು; ಸಾಸಿರ+ಅರ್; ಸಾಸಿರ=ಒಂದು ಸಾವಿರ; ಸಾಸಿರ್ವರ್=ಒಂದು ಸಾವಿರ ಮಂದಿ; ಏಱಿದೊಡೆ+ಅಲ್ಲದೆ; ಏಱು=ಹತ್ತು; ಅಲ್ಲದೆ=ಹೊರತು; ಏಱಿದೊಡಲ್ಲದೆ=ಹತ್ತದಿದ್ದರೆ; ಈ ಓಡಮ್=ಈ ದೋಣಿಯು; ನಡೆಯದು=ಮುಂದೆ ಸಾಗದು;

**ಸಾಸಿರ್ವರ್ ಏಱುದೊಡಲ್ಲದೆ ಈ ಓಡಮ್ ನಡೆಯದು**=ಒಂದು ಸಾವಿರ ಮಂದಿ ಈ ದೋಣಿಯನ್ನು ಹತ್ತದಿದ್ದರೆ, ಇದು ಮುಂದೆ ಸಾಗುವುದಿಲ್ಲ;

ಅನಿಬರ=ಅವರೆಲ್ಲರ ಅಂದರೆ ಸಾವಿರ ಮಂದಿಯ; ಬಿಣ್ಪು=ಭಾರ/ಹೊರೆ/ತೂಕ; ಆಮ್=ನಾವು; ಅಪ್ಪೆಮ್=ಆಗುತ್ತೇವೆ; ಏರಿಸು=ಹತ್ತಿಸಿಕೊಳ್ಳುವುದು;

**ಅನಿಬರ ಬಿಣ್ಪುಮ್ ಆಮ್ ಅಪ್ಪೆಮ್ ಏಱಿಸು**=ನಾವೊಬ್ಬರೇ ಅಷ್ಟು ಮಂದಿಯ ಭಾರವಾಗುತ್ತೇವೆ, ದೋಣಿಗೆ ನಮ್ಮನ್ನು ಹತ್ತಿಸಿಕೊ:

ಅಂತೆ=ಆ ರೀತಿ; ಗೆಯ್ವೆನ್=ಮಾಡುತ್ತೇನೆ;

**ಅಂತೆ ಗೆಯ್ವೆನ್ ಎಂದು ಓಡಮ್ ಏಱಿಸಿ ನಡೆಯಿಸುವಲ್ಲಿ**=ನೀವು ಹೇಳಿದಂತೆಯೇ ಮಾಡುತ್ತೇನೆ ಎಂದು ಹೇಳಿ, ಪರಾಶರ ಮುನಿಯನ್ನು ದೋಣಿಗೆ ಹತ್ತಿಸಿಕೊಂಡು ಮತ್ಸ್ಯಗಂಧಿಯು ದೋಣಿಯನ್ನು ನಡೆಸುತ್ತಿರುವಾಗ;

ದಿವ್ಯ=ಸುಂದರವಾದ; ಕನ್ಯೆ=ಕುಮಾರಿ; ನೋಡಿ=ಕಂಡು; ಮನ+ಒಳ್; ಮನ=ಮನಸ್ಸು; ಒಳ್=ಅಲ್ಲಿ; ಸೋಲ್=ಮೋಹಗೊಂಡು;

**ಮುನೀಂದ್ರನ್ ದಿವ್ಯ ಕನ್ಯೆಯನ್ ನೋಡಿ ಮನದೊಳ್ ಸೋಲ್ತು**=ಪರಾಶರ ಮುನಿಯು ಚೆಲುವೆ ಮತ್ಸ್ಯಗಂಧಿಯನ್ನು ನೋಡಿ ಮೋಹಗೊಂಡು;

ಆಕೆಯ=ಮತ್ಸ್ಯಗಂಧಿಯ; ಒಡಲು=ಮಯ್; ಈ=ಈಗ ಇರುವ; ದುರ್ಗಂಧ=ಗಬ್ಬು ವಾಸನೆ; ಪೋಪ+ಅಂತೆ; ಪೋ=ಹೋಗು; ಪೋಪಂತೆ=ಹೋಗುವಂತೆ; ಯೋಜನ=ದಾರಿಯಲ್ಲಿ ಸಾಗುತ್ತಿರುವಾಗ ದೂರದ ಅಳತೆಯನ್ನು ಸೂಚಿಸುವ ಪದ; ನಾಲ್ಕು ಹರಿದಾರಿ; ಎರಡು ಗಾವುದ; ಗಂಧಿತ್ವ=ಕಂಪಿನಿಂದ ಕೂಡಿರುವುದು; ಯೋಜನಗಂಧಿತ್ವ=ಒಂದು ಯೋಜನದ ಸುತ್ತಳತೆಯಲ್ಲಿ ಕಂಪು ಹಬ್ಬಿರುವುದು; ಇತ್ತು=ನೀಡಿ;

**ಆಕೆಯ ಒಡಲ ಈ ದುರ್ಗಂಧ ಪೋಪಂತೆ ಯೋಜನ ಗಂಧಿತ್ವಮನ್ ಇತ್ತು**=ಆಕೆಯ ಮಯ್ಯಿಂದ ಹೊಡೆಯುತ್ತಿದ್ದ ಗಬ್ಬು ವಾಸನೆಯನ್ನು ಹೋಗಲಾಡಿಸಿದನು. ಆಕೆಯ ಮಯ್ಯಿನ ಸುವಾಸನೆಯು ಒಂದು ಯೋಜನದ ಸುತ್ತಳತೆಯಲ್ಲಿ ಪಸರಿಸುವಂತೆ ಇದ್ದುದರಿಂದ ಆಕೆಯು ಯೋಜನಗಂಧಿ ಎನಿಸಿಕೊಂಡಳು; ಯೋಜನಗಂಧಿ=ಮತ್ಸ್ಯಗಂಧಿಯ ಮತ್ತೊಂದು ಹೆಸರು;

ಮಂಜು=ಹಿಮ; ಕಾಂಡಪಟ+ಅಂತೆ; ಕಾಂಡಪಟ=ಪರದೆ; ಅಂತೆ=ಹಾಗೆ; ಇರ್ಪ+ಅನ್ನೆಗಮ್; ಇರ್ಪ=ಇರುವ;

ಅನ್ನೆಗಮ್=ಆ ಸಮಯದಲ್ಲಿ; ಇರ್ಪನ್ನೆಗಮ್=ಆ ಸಮಯದಲ್ಲಿ ಇರುವಂತೆ; ಮಾಡಿ=ರಚಿಸಿ;

**ಮಂಜನ್ ಕಾಂಡಪಟದಂತೆ ಇರ್ಪನ್ನೆಗಮ್ ಮಾಡಿ**=ತಮ್ಮಿಬ್ಬರ ಸುತ್ತ ಮಂಜಿನ ಪರದೆಯನ್ನು ಕಟ್ಟಿ;

ಅಲಂಪು=ಚೆಲುವು; ಅಟ್ಕಿಱು=ಅಕ್ಕರೆ; ಈಯೆ=ನೀಡಲು; ಕೂಡು=ಕಾಮದ ನಂಟನ್ನು ಹೊಂದುವುದು; ಎಡೆ=ಜಾಗ; ಮಹಾ=ದೊಡ್ಡ; ಮುನಿಪನ್=ಮುನಿಯು; ಜ್ಞಾನ=ಅರಿವು; ಸ್ವರೂಪ=ಆಕಾರ; ಜ್ಞಾನಸ್ವರೂಪ=ಜ್ಞಾನಿಯಾದವನು; ಪುಟ್ಟಿದನ್=ಹುಟ್ಟಿದನು;

**ಅಲಂಪು ಅಟ್ಕಿಱಿನ್ ಈಯೆ ಕೂಡುವ ಎಡೆಯೊಳ್ ಮಹಾ ಮುನಿಪನ್ ಜ್ಞಾನಸ್ವರೂಪನ್ ಪುಟ್ಟಿದನ್**=ಯೋಜನಗಂಧಿಯ ಚೆಲುವು ಪರಾಶರಮುನಿಯಲ್ಲಿ ಅಕ್ಕರೆಯನ್ನು ಮೂಡಿಸಲು, ಇಬ್ಬರು ಕಾಮದ ನೆಂಟನ್ನು ಪಡೆದ ಎಡೆಯಲ್ಲಿ ಮಹಾಮುನಿಯೂ ಮತ್ತು ಜ್ಞಾನಿಯೂ ಆದ ಮಗನು ಹುಟ್ಟಿದನು;

ದಿವ್ಯ=ಉತ್ತಮವಾದುದು; ದಿವ್ಯಮುನಿಗಳ್ಗೆ=ಉತ್ತಮರೆಂದು ಹೆಸರು ಪಡೆದ ಮುನಿಗಳಿಗೆ;

ಅಂತು=ಆ ರೀತಿ; ಏನ್ ಗೆಯ್ದೊಡಮ್; ಏನ್=ಯಾವುದನ್ನು; ಗೆಯ್=ಮಾಡು; ಗೆಯ್ದೊಡಮ್=ಮಾಡಿದರೂ; ತೀರ್=ಮುಗಿ;

**ದಿವ್ಯಮುನಿಗಳ್ಗೆ ಅಂತು ಏಗೆಯ್ದೊಡಂ ತೀರದೇ**=ದೊಡ್ಡ ಮುನಿಗಳೆಂದು ಹೆಸರಾಂತವರು ಏನು ಮಾಡಿದರೂ ನಡೆಯುತ್ತದೆಯಲ್ಲವೇ;

ನೀಲ+ಅಂಬುದ; ನೀಲ=ಒಂದು ಬಗೆಯ ಬಣ್ಣ; ಅಂಬುದ=ಮೋಡ; ನೀಲಾಂಬುದ=ನೀಲಿಯ ಮೋಡ;

ಶ್ಯಾಮ=ಕಡು ನೀಲಿ ಬಣ್ಣ;

**ನೀಲಾಂಬುದ ಶ್ಯಾಮನುಮ್**=ಕಪ್ಪು ಮಿಶ್ರಿತ ನೀಲಿ ಬಣ್ಣದ ಮೋಡದಂತೆ ಮಯ್ ಬಣ್ಣವುಳ್ಳವನು;

ಕನಕ=ಹೊನ್ನು; ಪಿಂಗಳ=ಕಂದು ಬಣ್ಣ; ಜಟಾ=ಹೆಣೆದುಕೊಂಡು ಗಂಟುಗಂಟಾದ ತೆಕ್ಕೆಯ ತಲೆಕೂದಲು; ಬಂಧ=ಕಟ್ಟು; ಕಳಾಪ=ಗುಂಪು;

**ಕನಕ ಪಿಂಗಳ ಜಟಾಬಂಧಕಳಾಪನುಮ್**=ಹಳದಿ ಮಿಶ್ರಿತ ಕಂದು ಬಣ್ಣದ ತಲೆಕೂದಲಿನ ಹೆಣಿಗೆಯಿಂದಾದ ಮುಡಿಯುಳ್ಳವನು;

ದಂಡ=ಕೋಲು/ಯೋಗದಂಡ; ಕಪಾಲ=ಬಟ್ಟಲಿನ ಆಕಾರದಲ್ಲಿರುವ ತಲೆಚಿಪ್ಪು; ಹಸ್ತ=ಕಯ್;

**ದಂಡಕಪಾಲಹಸ್ತನುಮ್**=ಒಂದು ಕೈಯಲ್ಲಿ ಯೋಗ ದಂಡವನ್ನು ಮತ್ತು ಮತ್ತೊಂದು ಕೈಯಲ್ಲಿ ಕಪಾಲವನ್ನು ಹಿಡಿದು ಕೊಂಡಿರುವವನು;

ಕೃಷ್ಣ=ಕಪ್ಪು ಬಣ್ಣ; ಮೃಗ=ಜಿಂಕೆ; ಕೃಷ್ಣಮೃಗ=ಕಪ್ಪು ಬಣ್ಣದ ಜಿಂಕೆ; ತ್ವಕ್=ತೊಗಲು; ಪರಿಧಾನ=ಉಡುಪು; ಆಗೆ=ಆಗಿ;

**ಕೃಷ್ಣಮೃಗ ತ್ವಕ್ಪರಿಧಾನನುಮ್ ಆಗೆ**=ಜಿಂಕೆಯ ತೊಗಲನ್ನು ಉಟ್ಟು ಕೊಂಡಿರುವವನಾಗಿ;

ವ್ಯಾಸ=ಮತ್ಸ್ಯಗಂಧಿ ಮತ್ತು ಪರಾಶರನಿಗೆ ಹುಟ್ಟಿದ ಮಗನ ಹೆಸರು; ಭಟ್ಟಾರಕ=ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಒಲವು ನಲಿವು ಆದರ ಸೂಚಕವಾಗಿ ಸೇರುವ ಪದ; ವ್ಯಾಸಭಟ್ಟಾರಕನ್=ಪೂಜ್ಯನಾದ ವ್ಯಾಸ ರಿಸಿಯು; ಪುಟ್ಟುವುದುಮ್=ಹುಟ್ಟಲು;

**ವ್ಯಾಸಭಟ್ಟಾರಕನ್ ಪುಟ್ಟುವುದುಮ್**=ಪೂಜ್ಯನಾದ ವ್ಯಾಸ ಮುನಿಯು ಹುಟ್ಟಲು;

ಪುನಃ=ಮತ್ತೆ; ಕನ್ಯಾಭಾವವನ್=ಕನ್ನೆತನವನ್ನು ಅಂದರೆ ಕಾಮದ ಕೂಡುವಿಕೆಗೆ ಮೊದಲು ಇದ್ದ ಸ್ಥಿತಿಯನ್ನು; ದಯೆಗೆಯ್ದು=ನೀಡಿ; ಆತನನ್=ವ್ಯಾಸನನ್ನು; ಒಡಗೊಂಡು=ಜತೆಗೂಡಿ; ಪೋದನ್=ಹೋದನು;

**ಸತ್ಯವತಿಗೆ ಪರಾಶರನ್ ಪುನಃ ಕನ್ಯಾಭಾವಮನ್ ದಯೆಗೆಯ್ದು ಆತನನ್ ಒಡಗೊಂಡು ಪೋದನ್** =ಸತ್ಯವತಿಗೆ ಮೊದಲಿನ ರೀತಿಯಲ್ಲಿಯೇ ಕನ್ನೆತನ ಇರುವಂತೆ ವರವನ್ನು ನೀಡಿ, ಮಗನಾದ ವ್ಯಾಸನನ್ನು ತನ್ನೊಡನೆ ಕರೆದುಕೊಂಡು ಹೋದನು;

ಇತ್ತಲ್=ಈ ಕಡೆ/ಯಮುನಾ ನದಿಯ ತೀರದ ಕಾಡಿನಲ್ಲಿ; ಮೃಗಯಾ=ಪ್ರಾಣಿಗಳ ಬೇಟೆ; ವ್ಯಾಜ=ಕಾರಣ; ತೊಟಲ್+ತರ್ಪನ್; ತೊಟಲ್=ಅಡ್ಡಾಡುವಿಕೆ; ತರ್ಪನ್=ಬರುತ್ತಿರುವಾಗ;

**ಇತ್ತಲ್ ಒರ್ಮೆ ಶಂತನು ಮೃಗಯಾವ್ಯಾಜದಿನ್ ತೊಟಲ್ತರ್ಪನ್**=ಒಂದು ದಿನ ಶಂತನು ಮಹಾರಾಜನು ಯಮುನಾ ನದೀ ತೀರದ ಕಾಡಿನಲ್ಲಿ ಪ್ರಾಣಿಗಳ ಬೇಟೆಯಾಡಲೆಂದು ಅಡ್ಡಾಡುತ್ತಿರುವಾಗ;

ತತ್+ಮೃಗ+ಶಾಬ+ಅಕ್ಷಿಯ; ತತ್=ಆ/ಅದು; ಮೃಗ=ಜಿಂಕೆ; ಶಾಬ=ಮರಿ; ಅಕ್ಷಿ=ಕಣ್ಣು;

ತನ್ಮೃಗಶಾಬಾಕ್ಷಿಯ=ಜಿಂಕೆಯ ಮರಿಯ ಕಣ್ಣುಗಳಂತೆ ಕಣ್ಣುಳ್ಳ ಯೋಜನಗಂಧಿಯ;

ಕಂಪು=ಪರಿಮಳ; ಪಳಂಚು=ತಾಗು; ಸೋಂಕು; ತಟ್ಟಿ=ಮೂಗಿಗೆ ಹೊಡೆದು;

ಮಧುಪವ್+ಪೋಲ್; ಮಧುಪ=ತುಂಬಿ; ಪೋಲ್=ಅಂತೆ; ಸೋಲ್=ಮೋಹಗೊಳ್ಳು; ಪರವಶವಾಗು; ಮಧುಪಂಬೋಲ್ ಸೋಲ್ತು=ಹೂವಿನ ಮಕರಂದದ ಸುವಾಸನೆಗೆ ದುಂಬಿಯು ಮೋಹಗೊಳ್ಳುವಂತೆ ಒಲಿದು; ಕಂಡು=ನೋಡಿ;

**ತನ್ಮೃಗಶಾಬಾಕ್ಷಿಯ ಕಂಪು ಪಳಂಚಲ್ಕೆ ತಟ್ಟಿ ಮಧುಪಂಬೋಲ್ ಸೋಲ್ತು ಕಂಡು** =ಜಿಂಕೆಮರಿಯ ಕಣ್ಣುಗಳಂತೆ ಕಣ್ಣುಳ್ಳ ಯೋಜನಗಂಧಿಯ ಮಯ್ಯಿನಿಂದ ಹೊರಹೊಮ್ಮುತ್ತಿರುವ ಪರಿಮಳವು ಮೂಗಿಗೆ ಹೊಡೆಯಲು, ಹೂವಿನ ಮಕರಂದಕ್ಕೆ ಮನಸೋಲುವ ದುಂಬಿಯಂತೆ ಆ ಸುವಾಸನೆಗೆ ಮನಸೋತು, ಸುವಾಸನೆ ಬಂದ ಎಡೆಯನ್ನು ಅರಸುತ್ತ ಬಂದು ಯೋಜನಗಂಧಿಯನ್ನು ಕಂಡು;

ನಲ್ಮೆ=ಅನುರಾಗ; ಒಲಿ=ಮೆಚ್ಚು; ನಲ್ಮೆಗೆ ಒಲ್ದು=ಕಾಮದ ಸೆಳೆತಕ್ಕೆ ಒಳಗಾಗಿ;

ದಿಬ್ಯ=ಒಂದು ಬಗೆಯ ಆಚರಣೆ. ಆರೋಪಕ್ಕೆ ಗುರಿಯಾದ ವ್ಯಕ್ತಿಯು ತಾನು ತಪ್ಪನ್ನು ಮಾಡಿಲ್ಲವೆಂದು ಸಾಬೀತು ಪಡಿಸುವುದಕ್ಕಾಗಿ ಆಣೆಯನ್ನು ಇಕ್ಕುವಾಗ ಇಲ್ಲವೇ ಪ್ರಮಾಣವನ್ನು ಮಾಡುವಾಗ ಕಾದ ಕಬ್ಬಿಣದ ಸರಳನ್ನು ಕಯ್ಯಿಂದ ಹಿಡಿದುಕೊಳ್ಳುವ, ನಾಗರ ಹಾವು ಇರುವ ಮಡಕೆಯೊಳಕ್ಕೆ ಕಯ್ಯನ್ನು ಹಾಕುವ ಇಲ್ಲವೇ ನಂಜನ್ನು ಕುಡಿಯುವ ಆಚರಣೆ. ಕಯ್ ಸುಡದಿದ್ದರೆ, ಹಾವು ಕಚ್ಚಿ ಸಾಯದಿದ್ದರೆ, ನಂಜು ಏರಿ ಸಾವನ್ನಪ್ಪದಿದ್ದರೆ ಆತನು ತಪ್ಪನ್ನು ಮಾಡಿಲ್ಲವೆಂದು ಸಾಬೀತಾಗುತ್ತಿತ್ತು;

ಪಿಡಿ+ಅಂತೆ+ವೋಲ್; ಪಿಡಿ=ಹಿಡಿ/ಕಯ್ಗೊಳ್ಳು; ವೋಲ್=ಆ ರೀತಿ;

**ದಿಬ್ಯಮ್ ಪಿಡಿವಂತೆವೋಲ್ ಪಿಡಿದು**=ದಿಬ್ಯವನ್ನು ಹಿಡಿಯುವವನಂತೆ ಆಕೆಯ ಕೈಗಳನ್ನು ಹಿಡಿದುಕೊಂಡು;

ಪೋಪಮ್=ಹೋಗೋಣ; ಎಂದಂಗೆ=ಎಂದು ಕರೆದವನಿಗೆ;

**ನೀನ್ ಬಾ ಪೋಪಮ್ ಎಂದಂಗೆ**=ನೀನು ನನ್ನೊಡನೆ ಬಾ. ಹೋಗೋಣವೆಂದು ಕರೆದವನಿಗೆ;

ತತ್+ಕನ್ಯಕೆ=ಆ ತರುಣಿಯು; ಕನ್ಯೆ=ತರುಣಿ; ನಾಣ್ಚಿ=ನಾಚಿಕೊಂಡು; ಮೆಲ್ಲಗೆ=ಮೆಲು ದನಿಯಲ್ಲಿ; ಬೇಡುವೊಡೆ=ನನ್ನನ್ನು ಬಯಸುವುದಾದರೆ; ಎಮ್ಮ+ಅಯ್ಯನಮ್; ಎಮ್ಮ=ನಮ್ಮ; ಅಯ್ಯ=ಅಪ್ಪ; ಬೇಡು=ಕೇಳು/ಯಾಚಿಸು; ಎಂಬುದುಮ್=ಎಂದು ಹೇಳಲು;

**ತತ್ಕನ್ಯಕೆ ನಾಣ್ಚಿ ಮೆಲ್ಲಗೆ ಬೇಡುವೊಡೆ ನೀವ್ ಎಮ್ಮಯ್ಯನಮ್ ಬೇಡಿರೇ ಎಂಬುದುಮ್**=ಆ ತರುಣಿಯು ನಾಚಿಕೊಂಡು, ಮೆಲುದನಿಯಲ್ಲಿ ಶಂತನು ದೊರೆಗೆ 'ನೀವು ನನ್ನನ್ನು ಬಯಸುವುದಾದರೆ ನಮ್ಮ ಅಪ್ಪನನ್ನು ಕೇಳಿರಿ' ಎಂದು ನುಡಿಯಲು;

ಪೊಳಲ್=ಪಟ್ಟಣ; ಮಗುಳ್=ಹಿಂತಿರುಗು; ವಂದು=ಬಂದು;

**ಶಂತನು ಪೊಳಲ್ಗೆ ಮಗುಳ್ದು ವಂದು**=ಶಂತನು ಮಹಾರಾಜನು ತನ್ನ ಪಟ್ಟಣವಾದ ಹಸ್ತಿನಾವತಿಗೆ ಹಿಂತಿರುಗಿ ಬಂದು;

ಅವರ್+ಅಯ್ಯನ್+ಅಪ್ಪ; ಅಯ್ಯ=ತಂದೆ; ಅಪ್ಪ=ಆಗಿರುವ; ದಾಶರಾಜನ್+ಅಲ್ಲಿಗೆ; ಕೂಸು=ಕನ್ಯೆ; ಬೇಡು=ಕೇಳು; ಪೆರ್ಗಡೆ=ಹೆಗ್ಗಡೆ/ಮಂತ್ರಿ; ರಾಜನ ಆಡಳಿತದ ಕೆಲಸಗಳನ್ನು ನೋಡಿಕೊಳ್ಳುವ ವ್ಯಕ್ತಿ; ಅಟ್ಟು=ಕಳುಹಿಸು; ಅಟ್ಟಿದೊಡೆ=ಕಳುಹಿಸಿದರೆ;

**ಅವರಯ್ಯನಪ್ಪ ದಾಶರಾಜನಲ್ಲಿಗೆ ಕೂಸನ್ ಬೇಡೆ ಪೆರ್ಗಡೆಗಳನ್ ಅಟ್ಟಿದೊಡೆ**=ಯೋಜನಗಂಧಿಯ ತಂದೆ ದಾಶರಾಜನ ಬಳಿಗೆ 'ಹೆಣ್ಣನ್ನು ಕೇಳಲು' ಶಂತನು ದೊರೆಯು ತನ್ನ ಹೆಗ್ಗಡೆಗಳನ್ನು ಕಳುಹಿಸಿದರೆ;

ದೊರೆ=ರಾಜ; ಪಿರಿಯ=ಹಿರಿಯ; ಗಾಂಗೇಯ=ಗಂಗೆಯ ಮಗ; ಕ್ರಮ+ಕ್ರಮ+ ಅರ್ಹನುಮ್; ಕ್ರಮ=ವಂಶ ಪರಂಪರೆಯಿಂದ ಬಂದ ರಾಜ್ಯಕ್ಕೆ; ಕ್ರಮ=ಯೋಗ್ಯವಾಗಿ/ ನ್ಯಾಯವಾಗಿ; ಅರ್ಹನುಮ್=ಹಕ್ಕನ್ನು ಹೊಂದಿರುವವನು; ಇರ್ದಂತೆ=ಇರುವಾಗ; ಎನ್ನ=ನನ್ನ; ಮಗಳ್+ಅನ್; ಕುಡೆವು=ಕೊಡುವುದಿಲ್ಲ;

**ದೊರೆಯ ಪಿರಿಯ ಮಗನುಮ್ ಗಾಂಗೇಯನ್ ಕ್ರಮ ಕ್ರಮಾರ್ಹನುಮ್ ಇರ್ದಂತೆ ಎನ್ನ ಮಗಳನ್ ಕುಡೆವು**=ಶಂತನು ದೊರೆಯ ಹಿರಿಯ ಮಗನಾದ ಗಾಂಗೇಯನು ವಂಶಪರಂಪರೆಯಿಂದ ಬಂದಿರುವ ರಾಜ್ಯದ ಪಟ್ಟಕ್ಕೆ ಹಕ್ಕುಳ್ಳವನಾಗಿದ್ದಾನೆ. ಆದ್ದರಿಂದ ನಮ್ಮ ಮಗಳನ್ನು ಶಂತನು ದೊರೆಗೆ ಕೊಡುವುದಕ್ಕೆ ಆಗುವುದಿಲ್ಲ;

ಎಮ್ಮ=ನಮ್ಮ ; ಮಗಳ್ಗೆ=ಮಗಳಿಗೆ; ಪುಟ್ಟಿದ+ಆತನ್; ಪುಟ್ಟಿದಾತನ್=ಹುಟ್ಟಿದವನು; ಒಡೆಯ=ರಾಜ; ಅಪ್ಪೊಡೆ=ಆಗುವುದಾದರೆ; ಕ್ರಮಕ್ಕೆ ಅರ್ಹನುಮ್ ಅಪ್ಪೊಡೆ=ರಾಜ್ಯದ ಪಟ್ಟಕ್ಕೆ ಹಕ್ಕುಳ್ಳವನಾದರೆ; ಕುಡುವೆಮ್=ಕೊಡುತ್ತೇವೆ; ಎನೆ=ಎಂದು ಹೇಳಲು;

**ಎಮ್ಮ ಮಗಳ್ಗೆ ಪುಟ್ಟಿದಾತನ್ ಪಿರಿಯ ಮಗನುಮ್ ಕ್ರಮಕ್ಕೆ ಅರ್ಹನುಮ್ ರಾಜ್ಯಕ್ಕೆ ಒಡೆಯನುಮ್ ಅಪ್ಪೊಡೆ ಕುಡುವೆಮ್ ಎನೆ**=ನಮ್ಮ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗನನ್ನು ರಾಜವಂಶದ ಪರಂಪರೆಯಂತೆ ಹಿರಿಯ ಮಗನೆಂದು ಪರಿಗಣಿಸಿ, ಪಟ್ಟದ

ಹಕ್ಕುದಾರಿಕೆಯನ್ನು ನೀಡಿ, ರಾಜನನ್ನಾಗಿ ಮಾಡುವುದಾದರೆ ಯೋಜನಗಂಧಿಯನ್ನು ಶಂತನು ದೊರೆಗೆ ಮದುವೆ ಮಾಡಿಕೊಡುತ್ತೇವೆ ಎಂದು ಹೇಳಲು;

ತತ್=ಆ; ಅದು; ವೃತ್ತಾಂತ=ಸುದ್ದಿ; ಮಂತ್ರಿಗಳಿನ್=ಮಂತ್ರಿಗಳಿಂದ;

**ತತ್ ವೃತ್ತಾಂತಮಮ್ ಮಂತ್ರಿಗಳಿನ್ ಶಂತನು ಕೇಳ್ದು**=ಆ ಸುದ್ದಿಯನ್ನು ಮಂತ್ರಿಗಳಿಂದ ಕೇಳಿದ ಶಂತನು ತನ್ನಲ್ಲಿಯೇ;

ಕ್ರಮಮಮ್=ವಂಶಪರಂಪರೆಯಿಂದ ಬಂದಿರುವ ಹಕ್ಕುದಾರಿಕೆಯನ್ನು; ವಿಕ್ರಮ+ಇಂದೆ; ವಿಕ್ರಮ=ಶೂರತನ; ತಾಳ್=ಹೊಂದು; ಇರ್ದಂತೆ=ಇರುವಾಗ;

**ಕ್ರಮಮಮ್ ವಿಕ್ರಮದಿಂದೆ ತಾಳ್ದುವ ಮಗನ್ ಗಾಂಗೇಯನ್ ಇರ್ದಂತೆ** =ವಂಶಪರಂಪರೆಯಿಂದ ಬರುವ ರಾಜಪದವಿಯನ್ನು ಶೂರತನದಿಂದ ಉಳಿಸಿ ಬೆಳೆಸಿ ಕಾಪಾಡಬಲ್ಲ ಮಗನಾದ ಗಾಂಗೇಯನು ಇರುವಾಗ;

ನೋಡ=ಅಚ್ಚರಿ, ಆತಂಕ ಇಲ್ಲವೇ ಆಘಾತದ ಸಂಗತಿಗಳನ್ನು ಸೂಚಿಸುವಾಗ ಈ ರೀತಿಯ ಪದವನ್ನು ಬಳಸಲಾಗುತ್ತೆ;

ಮರುಳ್=ತಿಳಿಗೇಡಿ; ತನ್ನದು+ಒಂದು; ಸವಿ=ರುಚಿ/ಕಾಮ; ಸೋಲ=ಮೋಹ;

**ತನ್ನದೊಂದು ಸವಿಗಮ್ ಸೋಲಕ್ಕಮ್**=ತನ್ನ ಮಯ್ ಮನದಲ್ಲಿ ಮಿಡಿದ ಕಾಮದ ತೀಟೆಗಾಗಿ; ಬೇಟದ+ಆಕೆ; ಬೇಟ=ಮೋಹ/ಪ್ರಣಯ;

ಬೇಟದಾಕೆ=ತಾನು ಮೋಹಿಸಿದವಳು; ತನ್ನನ್ನು ಮರುಳುಮಾಡಿದವಳು; ನಿಜ=ಸರಿಯಾದ; ನಿಜ ಕ್ರಮಮಮ್ ಇತ್ತನ್=ಪರಂಪರಾಗತವಾಗಿ ಬಂದ ರಾಜ್ಯದ ಪಟ್ಟವನ್ನು ಕೊಟ್ಟನು;

**ನೋಡ ಮರುಳ್ ಶಂತನು ತನ್ನದೊಂದು ಸವಿಗಮ್ ಸೋಲಕ್ಕಮ್ ತನ್ನಯ ಬೇಟದಾಕೆಯ ಮಗಂಗೆ ನಿಜಕ್ರಮಮನ್ ಇತ್ತನ್**=ತಿಳಿಗೇಡಿಯಾದ ಶಂತನು ದೊರೆಯು ತನ್ನ ಮಯ್ ಮನದ ಕಾಮದ ತೀಟೆಯನ್ನು ತೀರಿಸಿಕೊಳ್ಳುವುದಕ್ಕಾಗಿ ಮೋಹಿಸಿದವಳ ಮಗನಿಗೆ ರಾಜ್ಯದ ಪಟ್ಟವನ್ನು ಕಟ್ಟಿದನು;

ಎಂಬ=ಎನ್ನುವ; ಅಪಖ್ಯಾತಿ=ಕೆಟ್ಟ ಹೆಸರು; ಆವರ್ತಿಸು=ಎಲ್ಲೆಡೆ ಹರಡುವುದು; ಬಳ್ದೊಡೆ=ಹುಟ್ಟಿಕೊಂಡರೆ;

**ಎಂಬ ಒಂದು ಅಪಖ್ಯಾತಿ ಲೋಕಮನ್ ಆವರ್ತಿಸೆ ಬಳ್ದೊಡೆ**=ಎನ್ನುವ ಕೆಟ್ಟಹೆಸರು ಲೋಕದಲ್ಲಿ ಹರಡಿ ಹಬ್ಬಿದರೆ;

ತಕ್ಕೂರ್ಮೆ=ಹಿರಿತನ/ದೊಡ್ಡಸ್ತಿಕೆ; ಮಾಸು=ಕಳೆಗುಂದು;

**ಎನ್ನ ಕುಲಮುಮ್ ತಕ್ಕೂರ್ಮೆಯುಮ್ ಮಾಸದೇ**=ನನ್ನ ವಂಶದ ದೊಡ್ಡಸ್ತಿಕೆಯು ಕುಗ್ಗುತ್ತದೆಯಲ್ಲವೇ;

ನಾಣ್+ಕಾಪು; ನಾಣ್=ನಾಚಿಕೆ/ಲಜ್ಜೆ; ಕಾಪು=ಕಾಯುವಿಕೆ/ಕಾಪಾಡಿಕೊಳ್ಳುವಿಕೆ; ನಾಣ್ಗಾಪು=ಮರ್ಯಾದೆಯನ್ನು ಕಾಪಾಡಿಕೊಳ್ಳುವುದು; ಬಗೆದು=ಚಿಂತಿಸಿ;

**ತನ್ನ ನಾಣ್ಗಾಪನೆ ಬಗೆದು**=ತನ್ನ ಮತ್ತು ತನ್ನ ರಾಜವಂಶದ ಕೀರ್ತಿಯನ್ನು ಕಾಪಾಡಿಕೊಳ್ಳುವುದೇ ದೊಡ್ಡದೆಂದು ತಿಳಿದು;

ಅತನು=ಕಾಮದೇವ/ಮನ್ಮಥ/ಅನಂಗ. ಸಂಪತ್ತಿಗೆ ಲಕ್ಷ್ಮಿ ಮತ್ತು ವಿದ್ಯೆಗೆ ಸರಸ್ವತಿ ಎಂಬ ದೇವತೆಗಳನ್ನು ಜನಮನದಲ್ಲಿ ಕಲ್ಪಿಸಿಕೊಂಡಿರುವಂತೆಯೇ ವ್ಯಕ್ತಿಯ ಮಯ್ ಮನದಲ್ಲಿ ತುಡಿಯುವ ಕಾಮ, ಪ್ರಣಯ ಮತ್ತು ಮೋಹಕ್ಕೆ ಮನ್ಮಥನನ್ನು ಕಲ್ಪಿಸಿಕೊಳ್ಳಲಾಗಿದೆ; ಪರಿತಾಪ=ಹೆಚ್ಚಾದ ಬೇಗೆ; ಶರೀರನುಮ್+ಆಗಿ;

**ಅತನು ಪರಿತಾಪಿತ ಶರೀರನುಮಾಗಿ**=ಕಾಮದ ಬೇಗೆಯಿಂದ ಮಯ್ ಮನವು ಬೇಯುತ್ತಿರಲು;

ಕರಂಗಿ=ಸೊರಗಿ; ಎರ್ದೆ+ಕಿಡೆ; ಎರ್ದೆ=ಎದೆ; ಕಿಡು=ನಾಶವಾಗು; ಇಲ್ಲವಾಗು; ಎರ್ದೆಗಿಡೆ=ಮನಸ್ಸು ಸಂಕಟದಿಂದ ಕುಸಿದುಹೋಗುತ್ತಿರಲು;

**ಅತನು ಪರಿತಾಪಿತ ಶರೀರನುಮಾಗಿ ಶಂತನು ಕರಂಗಿ ಎರ್ದೆಗಿಡೆ**=ಕಾಮದ ಬೇಗೆಯಿಂದ ಶಂತನು ಕೊರಗಿ ಮಾನಸಿಕವಾಗಿ ಕುಗ್ಗಿಹೋಗಿರಲು;

ತತ್+ವೃತ್ತಾಂತಮ್+ಎಲ್ಲಮಮ್; ಅರಿದು=ತಿಳಿದುಕೊಂಡು;

**ತತ್ ವೃತ್ತಾಂತಮೆಲ್ಲಮಮ್ ಗಾಂಗೇಯನ್ ಅರಿದು**=ಈ ವೃತ್ತಾಂತವೆಲ್ಲವನ್ನೂ ಗಾಂಗೇಯನು ತಿಳಿದವನಾಗಿ;

ನೃಪತಿ=ರಾಜ; ಬೇಡಿದುದನ್=ಬಯಸಿರುವುದನ್ನು; ಕುಡಲ್+ಒಲ್ಲಂದು; ಕುಡಲ್=ಕೊಡಲು; ಒಲ್ಲಂದು=ಒಪ್ಪದಿದ್ದರೆ;

**ನೃಪತಿ ಬೇಡಿದುದನ್ ಕುಡಲೊಲ್ಲಂದು**=ರಾಜನು ಆಸೆಪಟ್ಟಿರುವುದನ್ನು ಕೊಡದೇ ಹೋದರೆ;

ಅಂಗಜ+ಉತ್ಪನ್ನ; ಅಂಗಜ=ಕಾಮದೇವ; ಉತ್ಪನ್ನ=ಹುಟ್ಟಿದ; ವಿಮೋಹ= ಮೋಹಪರವಶತೆ; ಅಳಿ=ಸಾಯು; ಅಳಿದಪನ್=ಸಾಯುತ್ತಾನೆ;

**ಅಂಗಜೋತ್ಪನ್ನ ವಿಮೋಹದಿಂದ ಅಳಿದಪನ್**=ಕಾಮದ ಬೇಗೆಯಿಂದ ಸಾಯುತ್ತಾನೆ;

ಎನ್ನಯ=ನನ್ನ; ದೂಸಱು=ನಿಮಿತ್ತ/ಕಾರಣ; ಎನ್ನಯ ದೂಸಱಿಮ್=ನನ್ನಿಂದಾಗಿ;

ಪತಿ=ರಾಜ; ಸತ್ತೊಡೆ=ಸಾವನ್ನಪ್ಪಿದರೆ; ಸತ್ತ ಪಾಪಮ್=ಸಾವಿನ ಪಾಪದ ಹೊರೆಯು; ಎನ್ನನ್=ನನ್ನನ್ನು; ನರಕಮ್+ಗಳ್+ಒಳ್; ನರಕ=ಸಂಕಟದ ನೆಲೆ; ತಡೆಯದೆ=ಬಿಡದೆ; ಅೞ್ದು=ಮುಳುಗಿಸು; ಅೞ್ದುಗುಮ್=ಮುಳುಗಿಸುತ್ತದೆ;

**ಎನ್ನಯ ದೂಸಱಿಮ್ ಪತಿ ಸತ್ತೊಡೆ ಸತ್ತ ಪಾಪಮ್ ಎನ್ನನ್ ನರಕಂಗಳೊಳ್ ತಡೆಯದೆ ಅೞ್ದುಗುಮ್**=ನನ್ನ ಕಾರಣದಿಂದಾಗಿ ದೊರೆಯು ಸಾವನ್ನಪ್ಪಿದರೆ, ಅದರ ಪಾಪ ನನಗೆ ಸುತ್ತಿಕೊಂಡು ನನ್ನನ್ನು ನರಕದಲ್ಲಿ ಮುಳುಗಿಸುತ್ತದೆ;

ಪೋ=ಹೋಗು; ಏವುದು=ಯಾವುದು; ರಾಜ್ಯಲಕ್ಷ್ಮಿ=ರಾಜ್ಯದ ಸಂಪತ್ತು/ಒಡೆತನ/ಪಟ್ಟ;

**ಪೋ ಏವುದು ರಾಜ್ಯಲಕ್ಷ್ಮಿ**=ನನ್ನ ತಂದೆಯ ಒಲವು ನಲಿವಿನ ಮುಂದೆ ಈ ರಾಜ್ಯದ ಸಂಪತ್ತು ದೊಡ್ಡದಲ್ಲ. ಈ ರಾಜ್ಯ ಒಡೆತನದಿಂದ ನನಗೆ ಏನು ತಾನೆ ಆಗಬೇಕು; ತಂದೆ+ಎಂದುದನೆ; ಎಂದುದನೆ=ಬಯಸಿರುವುದನ್ನೆ; ವಿವಾಹ+ಅನ್+ಇಂದೆ; ವಿವಾಹ=ಮದುವೆ; ಅನ್=ಅನ್ನು; ಇಂದೆ=ಈಗಲೇ;

**ತನ್ನಯ ತಂದೆ ಎಂದುದನೆ ಕೊಟ್ಟು ವಿವಾಹಮನ್ ಇಂದೆ ಮಾಡುವೆನ್**=ನನ್ನ ತಂದೆ ಆಸೆಪಟ್ಟಿರುವ ಹೆಣ್ಣನ್ನೇ ತಂದು ಮದುವೆಯನ್ನು ಈ ದಿನವೇ ಮಾಡುತ್ತೇನೆ; ನಿಶ್ಚಯಿಸಿ=ನಿರ್ಣಯಿಸಿಕೊಂಡು/ನಿರ್ಧರಿಸಿಕೊಂಡು;

**ಗಾಂಗೇಯನ್ ದಾಶರಾಜನಲ್ಲಿಗೆ ಬಂದು**=ಗಾಂಗೇಯನು ದಾಶರಾಜನ ಬಳಿಗೆ ಬಂದು;

ನಿಜ=ನಿಮ್ಮ; ತನೂಜೆ=ಮಗಳು; ನೀಡು=ತಡ/ಸಾವಕಾಶ; ನೀಡಿರದೆ=ತಡಮಾಡದೆ/ವಿಳಂಬ ಮಾಡದೆ; ಈವುದು=ಕೊಡುವುದು;

**ಈ ನಿಜ ತನೂಜೆಯನ್ ನೀಡಿರದೆ ಈವುದು**=ತಡಮಾಡದೆ ಈ ನಿಮ್ಮ ಮಗಳನ್ನು ನನ್ನ ತಂದೆಯೊಡನೆ ಮದುವೆ ಮಾಡುವುದು;

ವಧೂ=ಮದುವಣಗಿತ್ತಿ/ಮದುಮಗಳು; ಆದ=ಹುಟ್ಟುವ; ಪುತ್ರರೊಳ್=ಗಂಡು ಮಕ್ಕಳೊಡನೆ; ರಾಜ್ಯಲಕ್ಷ್ಮಿ=ರಾಜ್ಯ ಪಟ್ಟ/ಸಂಪತ್ತು/ಒಡೆತನ; ಕೂಡುಗೆ=ಸೇರಲಿ;

**ಈ ವಧೂಗೆ ಆದ ಪುತ್ರರೊಳ್ ರಾಜ್ಯಲಕ್ಷ್ಮಿ ಕೂಡುಗೆ**=ಇವಳ ಹೊಟ್ಟೆಯಲ್ಲಿ ಹುಟ್ಟುವ ಗಂಡು ಮಕ್ಕಳಿಗೆ ರಾಜ್ಯದ ಪಟ್ಟ ದೊರೆಯಲಿ;

ಅಂತು=ಹಾಗೆ; ಅದು=ರಾಜ್ಯದ ಪಟ್ಟ; ಎನಗೆ=ನನಗೆ; ಮೊಱೆ+ಅಲ್ತು; ಮೊಱೆ=ನಂಟು; ಅಲ್ತು=ಅಲ್ಲ;

**ಅಂತು ಅದು ಎನಗೆ ಮೊಱೆಯಲ್ತು**=ಇಂದಿನಿಂದ ನನಗೂ ರಾಜ್ಯದ ಪಟ್ಟಕ್ಕೂ ಯಾವ ನಂಟು ಇಲ್ಲ;

ನಿಕ್ಕುವಮ್=ನಿಶ್ಚಯವಾಗಿಯೂ; ಇಂದು ಮೊದಲಾಗಿರೆ=ಇಂದಿನ ಈ ಗಳಿಗೆಯಿಂದ; ಪೆಂಡಿರ್+ಎಂಬರ್+ಒಳ್; ಪೆಂಡಿರ್ ಎಂಬರೊಳ್=ಹೆಣ್ಣುಗಳು ಎಂದು ಎನಿಸಿಕೊಂಡವರೊಡನೆ; ಕೂಡುವನ್+ಅಲ್ಲೆನ್; ಕೂಡು=ಸೇರು;

**ಇಂದು ಮೊದಲಾಗಿರೆ ಪೆಂಡಿರ್ ಎಂಬರೊಳ್ ಕೂಡುವನಲ್ಲೆನ್**=ಇಂದಿನಿಂದ ನನ್ನ ಸಾವಿನ ತನಕ ನನ್ನ ಜೀವನದಲ್ಲಿ ಯಾವೊಂದು ಹೆಣ್ಣನ್ನು ಮದುವೆಯಾಗುವುದಿಲ್ಲ ಮತ್ತು ಹೆಣ್ಣಿನೊಡನೆ ಕಾಮದ ನಂಟನ್ನು ಹೊಂದುವುದಿಲ್ಲ;

ನದೀಸುತ=ಗಂಗಾದೇವಿಯ ಮಗನಾದ ಗಾಂಗೇಯ; ಆತನ=ಯೋಜನಗಂಧಿಯ ಅಪ್ಪನಾದ ದಾಶರಾಜನ; ಮನದ=ಮನಸ್ಸಿನಲ್ಲಿದ್ದ; ತೊಡರ್ಪು=ಆತಂಕ; ಪಿಂಗು=ತಗ್ಗು/ಕಡಿಮೆಯಾಗು/ಇಲ್ಲವಾಗು;

**ಎಂದು ನದೀಸುತನ್ ಆತನ ಮನದ ತೊಡರ್ಪನ್ ಪಿಂಗೆ ನುಡಿದು**=ದಾಶರಾಜನ ಮನದ ಆತಂಕವನ್ನು ಹೋಗಲಾಡಿಸುವಂತೆ ನುಡಿದು;

ಸತ್ಯವತಿ=ಯೋಜನಗಂಧಿಯನ್ನು ಈ ಹೆಸರಿನಿಂದಲೂ ಕರೆಯುತ್ತಿದ್ದರು; ಉಯ್ದು=ಕರೆದುಕೊಂಡು ಹೋಗಿ; ರಾಗ=ಒಲುಮೆ; ಕೂಡಿದನ್=ಸೇರಿಸಿದನು; ಒಂದು ಮಾಡಿದನು;

**ಸತ್ಯವತಿಯನ್ ಉಯ್ದು ರಾಗದಿನ್ ಪತಿಯೊಳ್ ಸತಿಯನ್ ಕೂಡಿದನ್**= ಒಲವಿನಿಂದ ಸತ್ಯವತಿಯನ್ನು ಕರೆದುಕೊಂಡು ಹೋಗಿ ಶಂತನುವಿನೊಡನೆ ಸತ್ಯವತಿಯನ್ನು ಜತೆಗೂಡಿಸಿದನು;

✦

# ಮತ್ಸ್ಯಗಂಧಿ ಪ್ರಸಂಗ
## ಪಂಪ ಭಾರತ ಪದ್ಯ–ಪ್ರಥಮಾಶ್ವಾಸ

ಒರ್ಮೆ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನುತ್ತರಾಪಥಕ್ಕೆ ಪೋಗುತ್ತುಂ ಬಂದು ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀಯೋಡಂ ನಡೆಯ ದೆಂಬುದುಮಾಮನಿಬರ ಬಿಣ್ಪುಮಪ್ಪೆಮೇಱಿಸೆಂದೊಡಂತೆ ಗೆಯ್ವೆನೆಂದೋಡಮೇಱಿಸಿ ನಡೆಯಿಸುವಲ್ಲಿ ದಿವ್ಯಕನ್ನೆಯನಟ್ಟಿರ್ತು ನೋಡಿ–

**ಮ॥ ಮನದೊಳ್ ಸೋಲ್ತು ಮುನೀಂದ್ರನಾಕೆಯೊಡಲೀ ದುರ್ಗಂಧವೋಪಂತೆ ಯೋ**
**ಜನ ಗಂಧಿತ್ವಮನಿತ್ತು ಕಾಂಡಪಟದಂತಿರ್ಪನ್ನೆಗಂ ಮಾಡಿ ಮಂ**
**ಜನಲಂಪಟ್ಟಿಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾ**
**ಮುನಿಪಂ ಪುಟ್ಟಿದನಂತು ದಿವ್ಯಮುನಿಗಳ್ಗೇಗೆಯ್ದೊಡಂ ತೀರದೇ. ॥69॥**

ವ॥ ಅಂತು ನೀಲಾಂಬುದ ಶ್ಯಾಮನುಂ ಕನಕ ಪಿಂಗಳ ಜಟಾಬಂಧಕಳಾಪನುಂ ದಂಡಕಪಾಳಹಸ್ತನುಂ ಕೃಷ್ಣಮೃಗ ತ್ವಕ್ಪರಿಧಾನನುಮಾಗೆ ವ್ಯಾಸಭಟ್ಟಾರಕಂ ಪುಟ್ಟುವುದುಮಾತನನೊಡಗೊಂಡು ಸತ್ಯವತಿಗೆ ಪುನಃ ಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದನಿತ್ತಲ್–

**ಮ॥ ಮೃಗಯಾವ್ಯಾಜದಿನೊರ್ಮೆ ಶಂತನು ತೊಱಲ್ತರ್ಪಂ ಪಳಂಚಲ್ಕೆ ತ**
**ನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು ಕಂಡೊಲ್ದು ನ**
**ಲ್ಮೆಗೆ ದಿಬ್ಬಂಬಿಡಿವಂತೆವೋಲ್ ಪಿಡಿದು ನೀನ್ ಬಾ ಪೋಪಮೆಂದಂಗೆ ಮೆ**
**ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ. ॥70॥**

ವ॥ ಎಂಬುದುಂ ಶಂತನು ಪೊಲಿಲ್ಗೆ ಮಗುಟ್ದು ವಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವೆಮ್ಮ ಮಗಳ್ಗೆ ಪುಟ್ಟದಾತಂ

ರಾಜ್ಯಕ್ಕೊಡೆಯನುಂ ಪಿರಿಯ ಮಗನುಂ ಕ್ರಮಕ್ಕರ್ಹನುಮಪ್ಪೊಡೆ ಕುಡುವೆಮೆನೆ ತದ್ವೃತ್ತಾಂತಮಮಂ ಮಂತ್ರಿಗಳಿಂ ಶಂತನು ಕೇಳ್ದು–

**ಮ॥ ಕ್ರಮಮಂ ವಿಕ್ರಮದಿಂದೆ ತಾಳ್ದುವ ಮಗಂ ಗಾಂಗೇಯನಿರ್ದಂತೆ ನೋ**
**ಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜ**
**ಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋ**
**ಕಮನಾವರ್ತಿಸೆ ಬಟಿಕ್ಕೊಡೆನ್ನ ಕುಲಮುಂ ತಕ್ಕೂರ್ಮೆಯುಂ ಮಾಸದೇ. ॥71॥**

ವ॥ ಎಂದು ತನ್ನ ನಾಣ್ಗಾಪನೆ ಬಗೆದತನು ಪರಿತಾಪಿತಶರೀರನುಮಾಗಿ ಶಂತನು ಕರಂಗೆರ್ದೆಗಿಡೆ ತದ್ವೃತ್ತಾಂತಮೆಲ್ಲಮಂ ಗಾಂಗೇಯನಱಿದು–

**ಉ॥ ಎನ್ನಯ ದೂಸಱಿಂ ನೃಪತಿ ಬೇಡಿದುದಂ ಕುಡಲೊಲ್ಲದಂಗಜೋ**
**ತ್ಪನ್ನ ವಿಮೋಹದಿಂದಱಿದಪಂ ಪತಿ ಸತ್ತೊಡೆ ಸತ್ತ ಪಾಪಮೆ**
**ನ್ನನ್ನರಕಂಗಳೊಳ್ ತಡೆಯದಟ್ಟುಗುಮೇವುದು ರಾಜ್ಯಲಕ್ಷ್ಮಿ ಪೋ**
**ತನ್ನಯ ತಂದೆಯೆಂದುದನೆ ಕೊಟ್ಟು ವಿವಾಹಮನಿಂದೆ ಮಾಡುವೆಂ. ॥72॥**

ವ॥ ಎಂದು ನಿಶ್ಚಯಿಸಿ ಗಾಂಗೇಯಂ ದಾಶರಾಜನಲ್ಲಿಗೆವಂದಾತನ ಮನದ ತೊಡರ್ಪಂ ಪಿಂಗೆ ನುಡಿದು–

**ಉ॥ ನೀಡಿರದೀವುದೀ ನಿಜ ತನೂಜೆಯನೀ ವಧುಗಾದ ಪುತ್ರರೊಳ್**
**ಕೂಡುಗೆ ರಾಜ್ಯಲಕ್ಷ್ಮಿ ಮೊಱೆಯಲ್ತೆನಗಂತದು ಪೆಂಡಿರೆಂಬರೊಳ್**
**ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವಮೆಂದು ರಾಗದಿಂ**
**ಕೂಡಿದನುಯ್ದು ಸತ್ಯವತಿಯಂ ಸತಿಯಂ ಪತಿಯೊಳ್ ನದೀಸುತಂ. ॥73॥**

✦

# ೨. ಅಂಬೆ ಪ್ರಸಂಗ

## ಪಾತ್ರಗಳು

**ಅಂಬೆ:** ಕಾಶಿರಾಜನ ಹಿರಿಯ ಮಗಳು.
ಕಾಶಿರಾಜನಿಗೆ ಅಂಬೆ-ಅಂಬಿಕೆ-ಅಂಬಾಲೆ ಎಂಬ ಹೆಸರಿನ ಮೂವರು ಹೆಣ್ಣು ಮಕ್ಕಳಿದ್ದರು.

**ಶಂತನು:** ಹಸ್ತಿನಾವತಿಯ ರಾಜ.

**ಸತ್ಯವತಿ:** ರಾಣಿ, ಶಂತನು ರಾಜನ ಹೆಂಡತಿ.

**ಚಿತ್ರಾಂಗದ ವಿಚಿತ್ರವೀರ್ಯ:** ಶಂತನು ಮತ್ತು ಸತ್ಯವತಿಯ ಇಬ್ಬರು ಗಂಡು ಮಕ್ಕಳು.

**ಗಾಂಗೇಯ:** ಶಂತನು ಮತ್ತು ಗಂಗಾದೇವಿಯ ಮಗ.

**ಸಾಲ್ವಲ:** ಅಂಬೆಯನ್ನು ಮದುವೆಯಾಗಲು ಬಯಸಿ ಅವಳಿಗೆ ಚಿಕ್ಕಂದಿನಲ್ಲಿ ಉಂಗುರವನ್ನು ತೊಡಿಸಿದ್ದ ಒಬ್ಬ ರಾಜಕುಮಾರ.

**ಪರಶುರಾಮ:** ಒಬ್ಬ ರಿಸಿ. ಗಾಂಗೇಯನ ವಿದ್ಯಾಗುರುಗಳು.

**ದಾಶರಾಜ:** ಸತ್ಯವತಿಯ ಸಾಕು ತಂದೆ.

# ಅಂಬೆ ಪ್ರಸಂಗ

ಶಂತನುವುಮ್ ಸತ್ಯವತಿಯುಮ್ ಅನ್ಯೋನ್ಯ ಆಸಕ್ತಚಿತ್ತರಾಗಿ ಕೆಲವು ಕಾಲಮ್ ಇರ್ಪನ್ನೆಗಮ್; ಅವರ ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಮ್ ಪ್ರತಾಪಿಗಳುಮ್ ಆಗಿ ಬಳೆಯುತ್ತ ಇರ್ಪನ್ನೆಗಮ್; ಶಂತನು ಪರಲೋಕ ಪ್ರಾಪ್ತನ್ ಆದೊಡೆ ಗಾಂಗೇಯನ್ ತದುಚಿತ ಪರಲೋಕ ಕ್ರಿಯೆಗಳಮ್ ಮಾಡಿ, ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕೆ ಅಧಿಷ್ಠಾನಮ್ ಕಟ್ಟುವಂತೆ ಚಿತ್ರಾಂಗದಂಗೆ ಪಟ್ಟಮನ್ ಕಟ್ಟಿ ರಾಜ್ಯಮ್ ಗೆಯಿಸುತ್ತುಮ್ ಇರ್ಪನ್ನೆಗಮ್; ಒರ್ವ ಗಂಧರ್ವನೊಳೆ ದ್ವಂದ್ವಯುದ್ಧಮಮ್ ಪೊಣರ್ಚೆ ಚಿತ್ರಾಂಗದನ್ ಕುರುಕ್ಷೇತ್ರಮನ್ ಕಳಮ್ ಪೇಱ್ದು ಕಾದಿ ಸತ್ತೊಡೆ,

ಗಾಂಗೇಯನ್ ವಿಚಿತ್ರವೀರ್ಯನನ್ ಧರಾಭಾರ ಧುರಂಧರನನ್ ಮಾಡಿ... ನಿಜಭುಜ ಪ್ರಾರಂಭದಿನ್ ಸಕಲ ಕ್ಷತ್ರಿಯ ಮೋಹದಿನ್ ಪೋಗಿ ರಾಜಸುತರೊಳ್ ತಾಗಿ ಕಾದಿ ಕೆಲರ್ ನೊಂದೊಡೆ, ತನ್ನ ಅಂಕದ ಒಂದು ಉಗ್ರಸಾಯಕದಿನ್ ನಾಯಕರನ್ ಪಡಲ್ವಡಿಸುತುಮ್, ಅಂಬೆ ಅಂಬಿಕೆ ಅಂಬಾಲೆ ಎಂಬ ಬಾಲೆಯರನ್ ಅಂದು ತಾನ್ ತಂದನ್. ಭೀಷ್ಮನ್ ಏನ್ ಯಶೋಭಾಗಿಯೋ.. ಅಂತು ತಂದು ತನ್ನ ತಮ್ಮನ್ ವಿಚಿತ್ರವೀರ್ಯಂಗೆ ಆ ಮೂವರ್ ಕನ್ನೆಯರನ್ ಪಾಣಿಗ್ರಹಣಮ್ ಗೆಯ್ವಾಗಳ್ ಎಲ್ಲರಿನ್ ಪಿರಿಯಾಕೆ...

**ಅಂಬೆ:** **ನಿನ್ನನ್ ಅಲ್ಲದೆ ಪೆಱರನ್ ಒಲ್ಲೆನ್.**

(ಎಂದು ಇರ್ದೊಡೆ ಮತ್ತಿನ ಇರ್ವರುಮನ್ ಮದುವೆಯನ್ ಮಾಡಿ ಗಾಂಗೇಯನ್ ಅಂಬೆಯನ್ ಇಂತು ಎಂದನ್.)

**ಗಾಂಗೇಯ:** **ಅತ್ತ ಸುರೇಶ್ವರ ಆವಸಥಮ್... ಇತ್ತ ಮಹೀತಳಮ್... ಉತ್ತ ಪನ್ನಗೋದಾತ್ತ ಸಮಸ್ತ ಲೋಕಮ್ ಅಱಿದಂತಿರೆ ಪೂಣ್ದ ಎನಗೆ, ಅಂಗಜೋತ್ಪತ್ತಿ ಸುಖಕ್ಕೆ ಸೋಲಲ್ ಆಗದು. ಪುರುಷವ್ರತಮ್ ಅಟಿಗುಮ್.**

ಪಂಕಜಾನನೇ, ಅಬ್ಬೆ ಎಂಬ ಮಾತನ್ ಈಗಳ್ ಅತ್ತಿಗೆ ಎಂದು ಎನಲ್ ಎನಗೆ ಏನ್ ಅಕ್ಕುಮೊ.

(ಎಂದು ನುಡಿದ ಗಾಂಗೇಯನ ನುಡಿಯೊಳ್ ಅವಸರಮನ್ ಪಸರಮನ್ ಪಡೆಯದೆ ತನಗೆ ಕಿಱಿಯಂದು ಉಂಗುರವಿಟ್ಟ ಸಾಲ್ವಲನೆಂಬ ಅರಸನಲ್ಲಿಗೆ ಪೋಗಿ...)

ಅಂಬೆ : **ನೀನ್ ಎನ್ನನ್ ಕೈಕೊಳವೇೞ್ಕುಮ್.**

(ಎಂದೊಡೆ ಆತನ್ ಇಂತು ಎಂದನ್.)

ಸಾಲ್ವಲ : **ಸರಿತ್ಸುತನ್ ಆ ಬಂಡಣದೊಳ್ ಎನ್ನನ್ ಓಡಿಸಿ ನಿನ್ನನ್ ಕೊಂಡುಯ್ದನ್. ಅದಱಿನ್ ಆನುಮ್ ಪೆಂಡತಿಯೆನ್ ಆದೆನ್. ಪೆಂಡಿರ್ ಪೆಂಡಿರೊಳ್ ಅದೆಂತು ಬೆರಸುವರ್ ಅಬಲೇ..**

(ಎಂದು ಸಾಲ್ವಲನ್ ಪರಿಭವದೊಳ್ ಆದ ತನ್ನ ಸಿಗ್ಗಮ್ ಸಾಲ್ವಿನಮ್ ಉಂಟುಮಾಡಿದೊಡೆ, ಆತನ ಮನಮನ್ ಒಡಂಬಡಿಸಲಾಱದೆ ಪರಶುರಾಮನಲ್ಲಿಗೆ ಪೋಗಿ..)

ಅಂಬೆ : **ಎನ್ನ ಸ್ವಯಂವರದೊಳ್ ನೆರೆದ ಅರಸು ಮಕ್ಕಳ್ ಎಲ್ಲರುಮನ್ ಭೀಷ್ಮನ್ ಓಡಿಸಿ, ಎನ್ನನ್ ಕೊಂಡುಬಂದು ಮದುವೆಯನ್ ನಿಲಲ್ ಒಲ್ಲದೆ ಅಟ್ಟಿ ಕಳೆದೊಡೆ, ಎನ್ನ ದೆವಸಮುಮ್ ಜವ್ವನಮುಮ್ ಅಡವಿಯೊಳಗೆ ಪೂತ ಪೂವಿನಂತೆ ಕಿಡಲ್ ಈಯದೆ, ಆತನನ್ ಎನ್ನನ್ ಪಾಣಿಗ್ರಹಣಮ್ ಗೆಯ್ವಂತು ಮಾಡು, ಮಾಡಲಾಱದೊಡೆ ಕಿಚ್ಚಮ್ ದಯೆಗೆಯ್ವುದು ..**

(ಎಂದು ಅಂಬೆ ಕಣ್ಣ ನೀರನ್ ತುಂಬೆ..)

ಪರಶುರಾಮ: **ನಯಮನ್ ನಂಬುವೊಡೆ ಎನ್ನ ಪೇೞ್ವ ಸತಿಯನ್ ಕೈಕೊಂಡನ್. ಅಂತಲ್ಲದೆ ಮೀಱಿ ಮೇಣ್ ದುರ್ಣಯಮನ್ ನಚ್ಚುವೊಡೆ, ಎನ್ನನ್ ಉಗ್ರ ರಣದೊಳ್ ಮಾರ್ಕೊಂಡನ್. ಶಂತನು ಸುತಂಗೆ ಆರಯೆ ಕಜ್ಜಮ್ ಪೆಱತಿಲ್ಲ. ಎನ್ನನ್ ಕರಮ್ ನಂಬಿದ ಅಂಬೆಯೊಳ್ ಎನ್ನ ಅಂಬೆ ವಲಮ್ ವಿವಾಹ ವಿಧಿಯನ್ ಮಾಳ್ಪೆನ್. ಪೆಱರ್ ಮಾೞ್ಪರೇ.**

(ಎಂದು ನಾಗಪುರಕ್ಕೆ ವರ್ಪ ಪರಶುರಾಮನ ಬರವನ್ ಗಾಂಗೇಯನ್ ಕೇಳ್ದು ಇದಿರ್ ವಂದು ಕನಕ ರಜತ ಪಾತ್ರಂಗಳೊಳ್ ಅರ್ಘ್ಯಮನ್ ಕೊಟ್ಟು ಪೊಡಮಟ್ಟು...)

ಗಾಂಗೇಯ: **ಬೆಸನ್ ಏನ್.**

**ಪರಶುರಾಮ:** **ಪೇಟಿಕ್ಷೆ... ಎನ್ನ ಬೆಸನನ್ ಕೈಕೊಳ್ವುದು. ಪಸುರ್ವಂದರ್ ಪಸೆಯೆಂಬ ಇವನ್ ಸಮೆದು ಈ ಕನ್ನೆಯನ್ ನೀನ್ ಕೈಕೊಳ್. ಚಿತ್ತದೊಳ್ ಕೊಳಲ್ಕಾಗದು ಎಂಬ ಎಸಕಮ್ ಉಳ್ಳೊಡೆ ಈಗಳ್ ಇವರ್ ಎಮ್ಮ ಆಚಾರ್ಯರ್ ಎಂದು ಓವದೆ, ಮಾಣದೆ ಏರ್ವೆಸನನ್ ಕೈದುಗೊಳ್. ಎರಡಱೊಳ್ ಮೆಚ್ಚಿತ್ತು ಏನ್ ಎಂದಪಯ್.**

(ಎಂದು ನುಡಿದ ಪರಶುರಾಮನ ನುಡಿಯನ್ ಗಾಂಗೇಯನ್ ಕೇಳ್ದು..)

**ಗಾಂಗೇಯ:** **ಎನಗೆ ವೀರಶ್ರೀಯುಮ್ ಕೀರ್ತಿಶ್ರೀಯುಮ್ ಅಲ್ಲದೆ ಉೞಿದ ಪೆಂಡಿರ್ ಮೊಱೆಯಲ್ಲ. ನೀವ್ ಇದನ್ ಏಕೆ ಆಗ್ರಹಮ್ ಗೆಯ್ವಿರಿ.**

**ಪರಶುರಾಮ:** **ಎಂತುಮ್ ಎಮ್ಮೊಳ್ ಕಾದಲ್ವೇೞ್ಟುದು...**

(ಎಂದು ಕೆಳದರ್ು ಅಂದು ಉಗ್ರ ರಣಾಗ್ರಹ ಪ್ರಣಯದಿಂದ ಆಗಳ್ ಕುರುಕ್ಷೇತ್ರಮನ್ ಕಳಮ್ ಪೇೞ್ದು, ಇರ್ವರುಮ್ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರ ಸಂಕುಲದಿಂದ ಒರ್ವರನ್ ಒರ್ವರ್ ಎಚ್ಚು, ನಿಜ ಪೀಠಾಂಭೋಜದಿನ್ ಬ್ರಹನ್ ಉಚ್ಚಳಿಪನ್ನಮ್ ಈ ತ್ರೈಲೋಕ್ಯದೊಳ್ ಪಿರಿದೊಂದು ಸಂಕಟಮನ್ ಮಾಡಿದರ್. ಅತರ್ಕ್ಯನ್ ವಿಕ್ರಾಂತನ್ ಭುಜಬಲನ್ ಅಸಾಮಾನ್ಯನ್ ಅಧಿಕನ್ ಪ್ರತಾಪನ್. ಪೋಗು, ಈತಂಗೆ ಎಣೆಯೆ ದಿವಿಜರ್... ವಾಯು ಪಥದೊಳ್ ಶಿತಾಸ್ತ್ರಂಗಳ್ ಪೊಂಕಮ್ ಕಿಡಿಸೆ ಸುಗಿದನ್ ಭಾರ್ಗವನ್...

ಇದೇನ್ ಪ್ರತಿಜ್ಞಾಗಾಂಗೇಯಂಗೆ ಅದಿರದೆ ಇದಿರ್ ನಿಲ್ವನ್ನರ್ ಒಳರೇ. ಅಂತು ಗಾಂಗೇಯನೊಳ್ ಪರಶುರಾಮನ್ ಕಾದಿ ಬಸವೞಿದು ಉಸಿರಲಪ್ಪೊಡಮ್ ಆಱದೆ ಮೂರ್ಛೆವೋಗಿರ್ದನನ್ ಕಂಡು ಕೋಪಾಗ್ನಿಯಿಂದಮ್ ಅಂಬೆಯೆಂಬ ದಂಡುರುಂಬೆ...)

**ಅಂಬೆ :** (ಗಾಂಗೇಯನಿಗೆ)

**ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆ.**

(ಎಂದು ಅಗ್ನಿಶರೀರೆಯಾಗಿ, ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ ಕಾರಣಾಂತರದೊಳ್ ಶಿಖಂಡಿಯಾಗಿರ್ದಳ್.)

✦

## ಅಂಬೆ ಪ್ರಸಂಗ
## ಪದ ವಿಂಗಡಣೆ ಮತ್ತು ತಿರುಳು

ಶಂತನು+ಉಮ್; ಉಮ್=ಊ; ಸತ್ಯವತಿ+ಉಮ್; ಅನ್ಯೋನ್ಯ=ಒಬ್ಬರು ಮತ್ತೊಬ್ಬರೊಡನೆ; ಆಸಕ್ತಚಿತ್ತರ್+ಆಗಿ; ಆಸಕ್ತಚಿತ್ತರ್=ಮೋಹಗೊಂಡವರು; ಇರ್ಪ+ಅನ್ನೆಗಮ್; ಇರ್ಪ=ಇರುವ; ಅನ್ನೆಗಮ್=ಆ ವರೆಗೆ/ಆ ತನಕ;

**ಶಂತನುವುಮ್ ಸತ್ಯವತಿಯುಮ್ ಅನ್ಯೋನ್ಯ ಆಸಕ್ತಚಿತ್ತರಾಗಿ ಕೆಲವು ಕಾಲ ಇರ್ಪನ್ನೆಗಮ್**=ಶಂತನೂ ಸತ್ಯವತಿಯೂ ಪರಸ್ಪರ ಒಲವು ನಲಿವಿನಿಂದ ಜತೆಗೂಡಿ ಕೆಲಕಾಲ ಬಾಳುತ್ತಿರಲು;

ಬೇಟ=ಬಯಕೆ/ಆಸೆ; ಕಂದಲ್+ಗಳ್+ಅಂತೆ; ಕಂದಲ್=ಮೊಳಕೆ/ಚಿಗುರು; ಅಂತೆ=ಹಾಗೆ; ವಿಚಿತ್ರವೀರ್ಯರ್+ಎಂಬ; ಎಂಬ=ಎನ್ನುವ;

**ಅವರ ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳು ಪುಟ್ಟೆ**=ಅವರ ಮೋಹದ ಕುಡಿಗಳಂತೆ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳು ಹುಟ್ಟಿ;

ಮಹಾ=ದೊಡ್ಡ; ಪ್ರಚಂಡರ್+ಉಮ್; ಪ್ರತಾಪಿ+ಗಳ್+ಉಮ್; ಪ್ರಚಂಡ= ಬಲಶಾಲಿ; ಪ್ರತಾಪಿ=ಕೀರ್ತಿವಂತ; ಬಳೆ=ಬೆಳೆ;

**ಮಹಾ ಪ್ರಚಂಡರುಮ್ ಪ್ರತಾಪಿಗಳುಮ್ ಆಗಿ ಬಳೆಯುತ್ತ ಇರ್ಪನ್ನೆಗಮ್**=ಹೆಚ್ಚಿನ ಬಲಶಾಲಿಗಳಾಗಿಯೂ ಕೀರ್ತಿವಂತರಾಗಿಯೂ ಬೆಳೆಯುತ್ತಿರಲು;

ಪರಲೋಕ=ವ್ಯಕ್ತಿಯು ಸತ್ತ ನಂತರ ಅವನ ಜೀವ ಮತ್ತೊಂದು ಲೋಕಕ್ಕೆ ಹೋಗುತ್ತದೆ ಎಂಬ ನಂಬಿಕೆಯು ಜನಮನದಲ್ಲಿದೆ; ಪ್ರಾಪ್ತ=ಹೊಂದುವುದು; ಆದೊಡೆ=ಆದರೆ;

**ಶಂತನು ಪರಲೋಕ ಪ್ರಾಪ್ತನ್ ಆದೊಡೆ**=ಶಂತನು ಸಾವನ್ನಪ್ಪಲು;

ತದುಚಿತ=ಆಗ ಮಾಡಬೇಕಾದ; ಪರಲೋಕ ಕ್ರಿಯೆ=ವ್ಯಕ್ತಿಯು ಸತ್ತ ನಂತರ ಅವನ ಜೀವಕ್ಕೆ ಪರಲೋಕದಲ್ಲಿ ಸದ್ಗತಿಯು ದೊರೆಯಲೆಂದು ಮಾಡುವ ಆಚರಣೆಗಳು;

**ಗಾಂಗೇಯನ್ ತದುಚಿತ ಪರಲೋಕ ಕ್ರಿಯೆಗಳಮ್ ಮಾಡಿ**=ಗಾಂಗೇಯನು ಸಾವಿನ ನಂತರದ ಕ್ರಿಯೆಗಳನ್ನು ಮಾಡಿ;

ಮುನ್ನೆ=ಈ ಮೊದಲು; ನುಡಿವಳಿ+ಎಂಬ; ನುಡಿವಳಿ=ಕೊಟ್ಟ ಮಾತು/ವಾಗ್ದಾನ; ಪ್ರಾಸಾದ=ಉಪ್ಪರಿಗೆ/ಮಹಡಿ; ಅಧಿಷ್ಠಾನ=ತಳಹದಿ/ಅಡಿಪಾಯ;

**ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕೆ ಅಧಿಷ್ಠಾನಮ್ ಕಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಮ್ ಕಟ್ಟಿ**=ದೊಡ್ಡ ಕಟ್ಟಡಕ್ಕೆ ಅಡಿಪಾಯವನ್ನು ಹಾಕುವಂತೆ ಎಂಬುದು ಒಂದು ರೂಪಕವಾಗಿ ಬಳಕೆಯಾಗಿದೆ. ಗಾಂಗೇಯನು ತನ್ನ ತಂದೆಯಾದ ಶಂತನುವಿಗೆ ಸತ್ಯವತಿಯನ್ನು ಮದುವೆ ಮಾಡಿಸುವಾಗ "ಶಂತನು ದೊರೆಯ ಸಾವಿನ ನಂತರ ತಾನು ಪಟ್ಟಕ್ಕೆ ಬರದೆ, ಸತ್ಯವತಿಯ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ರಾಜ್ಯದ ಪಟ್ಟವನ್ನು ಕಟ್ಟುತ್ತೇನೆ" ಎಂದು ಸತ್ಯವತಿಯ ತಂದೆಯಾದ ದಾಶರಾಜನಿಗೆ ನೀಡಿದ್ದ ವಾಗ್ದಾನವನ್ನು ಕಾರ್ಯರೂಪಕ್ಕೆ ತರುವಂತೆ ಚಿತ್ರಾಂಗದನಿಗೆ ಪಟ್ಟವನ್ನು ಕಟ್ಟಿ;

ಗೆಯ್=ಮಾಡು; ಗೆಯಿಸುತ್ತ+ಉಮ್ ;

**ರಾಜ್ಯಮ್ ಗೆಯಿಸುತ್ತುಮ್ ಇರ್ಪನ್ನೆಗಮ್**=ಚಿತ್ರಾಂಗದನಿಂದ ರಾಜ್ಯದ ಆಡಳಿತವನ್ನು ನಡೆಸುತ್ತಿರಲು;

ಒರ್ವ=ಒಬ್ಬ; ದ್ವಂದ್ವಯುದ್ಧ=ಇಬ್ಬರು ವ್ಯಕ್ತಿಗಳ ನಡುವೆ ನಡೆಯುವ ಕಾಳಗ; ಪೊಣರ್=ಉಂಟಾಗು; ಕಳಂ+ಪೇಳ್ದು; ಕಳ=ರಣರಂಗ; ಪೇಳ್ದು=ಹೇಳಿ;

**ಒರ್ವ ಗಂಧರ್ವನೊಳೆ ದ್ವಂದ್ವಯುದ್ಧಮಮ್ ಪೊಣರ್ಚೆ ಚಿತ್ರಾಂಗದನ್ ಕುರುಕ್ಷೇತ್ರಮಮ್ ಕಳಂಬೇಳ್ದು ಕಾದಿ ಸತ್ತೊಡೆ**=ಚಿತ್ರಾಂಗದನಿಗೆ ಒಬ್ಬ ಗಂಧರ್ವನೊಡನೆ ಕಾದಾಡುವ ಸನ್ನಿವೇಶ ಉಂಟಾಗಲು, ಕುರುಕ್ಷೇತ್ರವನ್ನು ರಣರಂಗವನ್ನಾಗಿ ಗೊತ್ತುಪಡಿಸಿ ಹೋರಾಡುವಾಗ ಚಿತ್ರಾಂಗದನು ಸಾವನ್ನಪ್ಪಲು;

ಧರಾಭಾರ=ನಾಡನ್ನು ಆಳುವ ಜವಾಬ್ದಾರಿ; ಧುರಂಧರ=ತನ್ನ ಪಾಲಿನ ಕೆಲಸವನ್ನು ಚೆನ್ನಾಗಿ ಮಾಡುವವನು;

**ಗಾಂಗೇಯನ್ ವಿಚಿತ್ರವೀರ್ಯನನ್ ಧರಾಭಾರ ಧುರಂಧರನಮ್ ಮಾಡಿ**= ಗಾಂಗೇಯನು ವಿಚಿತ್ರವೀರ್ಯನನ್ನು ರಾಜ್ಯದ ಆಡಳಿತವನ್ನು ಚೆನ್ನಾಗಿ ನಡೆಸಿಕೊಂಡು ಹೋಗುವಂತಹ ವ್ಯಕ್ತಿಯನ್ನಾಗಿ ರೂಪಿಸಿ;

ನಿಜ=ತನ್ನ; ಭುಜ=ತೋಳು; ಪ್ರಾರಂಭ=ಮೊದಲು ಮಾಡುವಿಕೆ ;

**ನಿಜಭುಜ ಪ್ರಾರಂಭದಿನ್**=ತನ್ನ ತೋಳ್ಬಲವನ್ನು ತೋರಿಸುವ ಉದ್ದೇಶದಿಂದ;

**ಸಕಲ ಕ್ಷತ್ರಿಯ ಮೋಹದಿನ್**=ವೀರನೆಂಬ ಕೀರ್ತಿಯನ್ನು ಪಡೆಯಬೇಕೆಂಬ ಕ್ಷತ್ರಿಯ ಸಹಜವಾದ ಆಸೆಯಿಂದ ;

**ಪೋಗಿ ತಾಗಿ ಕಾದಿ ಕೆಲರ್ ನೊಂದಡೆ**=ತನ್ನ ಹೆಣ್ಣುಮಕ್ಕಳ ಮದುವೆಗಾಗಿ ಕಾಶಿರಾಜನು ಅಣಿಗೊಳಿಸಿದ್ದ ಸ್ವಯಂವರ ಮಂಟಪಕ್ಕೆ ಹೋಗಿ, ಅಲ್ಲಿದ್ದವರ ಮೇಲೆ ಆಕ್ರಮಣ ಮಾಡಿ ಕಾದಾಡುವಾಗ ಕೆಲವರು ನೋವಿಗೀಡಾದರೆ;

ಅಂಕ=ಹೆಸರು; ಉಗ್ರ=ಪ್ರಚಂಡ; ಸಾಯಕ=ಬಾಣ; ಪಡಲ್ವಡಿಸು=ಚೆಲ್ಲಾಪಿಲ್ಲಿಯಾಗಿ ಚದುರುವಂತೆ ಮಾಡುವುದು;

**ತನ್ನ ಅಂಕದ ಒಂದು ಉಗ್ರಸಾಯಕದಿನ್ ರಾಜಸುತರೊಳ್ ನಾಯಕರನ್ ಪಡಲ್ವಡಿಸುತುಮ್**=ಗಾಂಗೇಯನು ತನ್ನ ಹೆಸರುಳ್ಳ ಒಂದು ಹರಿತವಾದ ಬಾಣವನ್ನು ಪ್ರಯೋಗಿಸಿ ರಾಜಕುಮಾರರಲ್ಲಿ ನಾಯಕರಾಗಿದ್ದವರನ್ನು ಚಲ್ಲಾಪಿಲ್ಲಿಯಾಗಿ ದಿಕ್ಕೆಟ್ಟು ಓಡುವಂತೆ ಮಾಡಿ;

**ಅಂಬೆ ಅಂಬಿಕೆ ಅಂಬಾಲೆ ಎಂಬ ಬಾಲೆಯರನ್ ಅಂದು ತಾನ್ ತಂದನ್**=ಅಂಬೆ ಅಂಬಿಕೆ ಅಂಬಾಲೆ ಎಂಬ ಹೆಸರಿನ ಕಾಶಿರಾಜನ ಮೂವರು ಹೆಣ್ಣುಮಕ್ಕಳನ್ನು ಹಸ್ತಿನಾವತಿಗೆ ಕರೆತಂದನು;

**ಭೀಷ್ಮನ್ ಏನ್ ಯಶೋಭಾಗಿಯೋ**=ಅಬ್ಬಾ! ಭೀಷ್ಮನು ಎಂತಹ ದೊಡ್ಡ ಕೀರ್ತಿಗೆ ಪಾತ್ರನಾಗಿದ್ದಾನೆ;

ಪಾಣಿ=ಕಯ್; ಗ್ರಹಣ=ಹಿಡಿಯುವುದು; ಪಾಣಿಗ್ರಹಣ=ಮದುವೆ; ಗೆಯ್ವ+ಆಗಳ್; ಗೆಯ್ವಾಗಳ್=ಮಾಡಲು ತೊಡಗಿದಾಗ.

**ಅಂತು ತಂದು ತನ್ನ ತಮ್ಮನ್ ವಿಚಿತ್ರವೀರ್ಯಂಗೆ ಆ ಮೂವರ್ ಕನ್ನೆಯರನ್ ಪಾಣಿಗ್ರಹಣ ಗೆಯ್ವಾಗಳ್**=ಆ ರೀತಿ ಕರೆತಂದ ಮೂವರು ತರುಣಿಯರನ್ನು ತನ್ನ ತಮ್ಮ ವಿಚಿತ್ರವೀರ್ಯನೊಡನೆ ಮದುವೆಯನ್ನು ಮಾಡಲು ಮುಂದಾದಾಗ;

ಎಲ್ಲರಿನ್=ಎಲ್ಲರಿಗಿಂತ; ಪಿರಿದು+ಆಕೆ; ಪಿರಿದು=ದೊಡ್ಡದು; ಪಿರಿಯಾಕೆ= ಹಿರಿಯಳು/ದೊಡ್ಡವಳು; ಪೆಱರನ್=ಬೇರೆಯವರನ್ನು; ಒಲ್ಲೆನ್=ಒಪ್ಪುವುದಿಲ್ಲ; ಇರ್ದಡೆ=ಇದ್ದರೆ;

**ಎಲ್ಲರಿನ್ ಪಿರಿಯಾಕೆ ನಿನ್ನನ್ ಅಲ್ಲದೆ ಪೆಱರನ್ ಒಲ್ಲೆನ್ ಎಂದು ಇರ್ದಡೆ**=ಆ ಮೂವರು ಹೆಣ್ಣುಮಕ್ಕಳಲ್ಲಿ ಎಲ್ಲರಿಗಿಂತ ದೊಡ್ಡವಳಾದ ಅಂಬೆಯು ಗಾಂಗೇಯನನ್ನು ಕುರಿತು "ನಿನ್ನಲ್ಲದೆ ನಾನು ಬೇರೆಯವರನ್ನು ಮದುವೆಯಾಗುವುದಿಲ್ಲ" ಎಂದು ಹೇಳಲು;

ಮತ್ತಿನ=ಉಳಿದ;

**ಮತ್ತಿನ ಇರ್ವರುಮನ್ ಮದುವೆಯನ್ ಮಾಡಿ**=ಇನ್ನುಳಿದ ಅಂಬಿಕೆ ಮತ್ತು ಅಂಬಾಲೆಯರನ್ನು ವಿಚಿತ್ರವೀರ್ಯನೊಡನೆ ಮದುವೆಯನ್ನು ಮಾಡಿ;

**ಗಾಂಗೇಯನ್ ಅಂಬೆಯನ್ ಇಂತು ಎಂದನ್**=ಗಾಂಗೇಯನು ಅಂಬೆಗೆ ಈ ರೀತಿ ಹೇಳಿದನು;

ಅತ್ತ=ಆ ಕಡೆ; ಸುರೇಶ್ವರ=ದೇವೇಂದ್ರ; ಆವಸಥ=ಮನೆ; ಸುರೇಶ್ವರ ಆವಸಥ=ದೇವಲೋಕ; ಇತ್ತ=ಈ ಕಡೆ; ಮಹೀತಳ=ಭೂಲೋಕ; ಉತ್ತ=ಮತ್ತೊಂದು ಕಡೆಯಲ್ಲಿ; ಪನ್ನಗ+ಉದಾತ್ತ; ಪನ್ನಗ=ಹಾವು/ನಾಗ; ಉದಾತ್ತ=ಉನ್ನತವಾದ/ದೊಡ್ಡದಾದ; ಪನ್ನಗೋದಾತ್ತ ಲೋಕ=ದೊಡ್ಡದಾಗಿರುವ ನಾಗಲೋಕ; ಸಮಸ್ತ=ಎಲ್ಲವೂ/ಎಲ್ಲರೂ; ಅಱಿದ+ ಅಂತೆ+ಇರೆ; ಅಱಿದಂತಿರೆ=ಗೊತ್ತಾಗುವಂತೆ; ಪೂಣ್=ಪ್ರಮಾಣ ಮಾಡು/ ಮಾತು ಕೊಡು;

**ಅತ್ತ ಸುರೇಶ್ವರ ಆವಸಥಮ್ ಇತ್ತ ಮಹೀತಳಮ್ ಉತ್ತ ಪನ್ನಗೋದಾತ್ತ ಲೋಕಮ್ ಸಮಸ್ತ ಅಱಿದಂತಿರೆ ಪೂಣ್ದ ಎನಗೆ**=ಆ ಕಡೆ ದೇವಲೋಕ, ಈ ಕಡೆ ಭೂಲೋಕ, ಮತ್ತೊಂದೆಡೆಯಲ್ಲಿರುವ ನಾಗಲೋಕಗಳೆಲ್ಲಕ್ಕೂ ಗೊತ್ತಾಗುವಂತೆ ವಾಗ್ದಾನವನ್ನು ನೀಡಿರುವ ನನಗೆ;

ಅಂಗಜ+ಉತ್ಪತ್ತಿ; ಅಂಗಜ=ಕಾಮ/ಮದನ; ಉತ್ಪತ್ತಿ=ಹುಟ್ಟುವಿಕೆ; ಅಂಗಜೋತ್ಪತ್ತಿ ಸುಖ=ಹೆಣ್ಣು ಗಂಡು ಜತೆಗೂಡಿ ಕಾಮದ ನಂಟನ್ನು ಪಡೆದಾಗ ಉಂಟಾಗುವ ಆನಂದ; ಸೋಲ್+ಅಲ್; ಸೋಲ್=ಮೋಹಗೊಳ್ಳುವುದು/ಪರವಶವಾಗುವುದು;

**ಅಂಗಜೋತ್ಪತ್ತಿ ಸುಖಕ್ಕೆ ಸೋಲಲ್ ಆಗದು**=ಕಾಮದ ಆನಂದವನ್ನು ಪಡೆಯುವುದಕ್ಕಾಗಿ ಮೋಹಗೊಳ್ಳುವುದು ಸರಿಯಲ್ಲ;

ವ್ರತ=ವ್ಯಕ್ತಿಯು ತಾನಾಗಿಯೇ ಕಯ್ಗೊಂಡಿರುವ ನಡವಳಿಕೆ; ಪುರುಷವ್ರತ=ಹೆಣ್ಣಿನೊಡನೆ ಕಾಮದ ನಂಟನ್ನು ಹೊಂದಬಾರದೆಂಬ ಸಂಕಲ್ಪ; ಅಳಿ=ನಾಶವಾಗು/ಹಾನಿಗೊಳ್ಳು;

**ಪುರುಷವ್ರತ ಅಳಿಗುಮ್**=ಹೆಣ್ಣಿನ ಸಂಗವನ್ನು ನಿರಾಕರಿಸಿರುವ ನನ್ನ ಸಂಕಲ್ಪವು ಹಾಳಾಗುತ್ತದೆ;

ಪಂಕಜ+ಆನನೆ; ಪಂಕಜ=ತಾವರೆ; ಆನನ=ಮುಖ/ಮೊಗ; ಪಂಕಜಾನನೆ= ತಾವರೆಯಂತಹ ಮೊಗವುಳ್ಳವಳು; ಅಬ್ಬೆ=ತಾಯಿ; ಅಳ್ತಿ+ಗೆ>ಅಳ್ತಿಗೆ>ಅತ್ತಿಗೆ; ಅಳ್ತಿ=ಪ್ರೀತಿ; ಅತ್ತಿಗೆ=ಪ್ರೀತಿ ಪಾತ್ರಳಾದವಳು/ಒಲಿದವಳು; ಅಕ್ಕುಮೊ=ಆಗುವುದೋ;

**ಪಂಕಜಾನನೇ, ಅಬ್ಬೆ ಎಂಬ ಮಾತನ್ ಈಗಳ್ ಅತ್ತಿಗೆ ಎಂದು ಎನಲ್ ಎನಗೆ ಏನ್ ಅಕ್ಕುಮೊ**=ಎಲೈ ಅಂಬೆ, ನಿನ್ನನ್ನು ಮೊದಲುಗೊಂಡು ಎಲ್ಲ ಹೆಣ್ಣುಗಳನ್ನು ನನ್ನ

ತಾಯಿಯ ಸಮಾನರೆಂದು ತಿಳಿದಿರುವ ನನಗೆ ಈಗ ನಿನ್ನನ್ನು ಕಾಮದ ನೋಟದಿಂದ ನೋಡುತ್ತ "ಒಲಿದವಳು" ಎಂದು ಕರೆಯುವುದಕ್ಕೆ ಹೇಗೆ ತಾನೆ ಆಗುತ್ತದೆ;

ನುಡಿ+ಒಳ್; ಅವಸರ=ಹೊತ್ತು/ವೇಳೆ; ಪಸರ=ಸಲಿಗೆ/ಪ್ರೀತಿ;

**ಎಂದು ನುಡಿದ ಗಾಂಗೇಯನ ನುಡಿಯೊಳ್ ಅವಸರಮಮ್ ಪಸರಮಮ್ ಪಡೆಯದೆ**=ಗಾಂಗೇಯನು ಆಡಿದ ನುಡಿಗಳಲ್ಲಿ ತನಗೆ ಅವನನ್ನು ಗಂಡನನ್ನಾಗಿ ಪಡೆಯುವ ಅವಕಾಶವಾಗಲಿ ಇಲ್ಲವೇ ಪ್ರೀತಿಯಾಗಲಿ ಇಲ್ಲದಿರುವುದನ್ನು ತಿಳಿದು;

ಕಿಱಿಯಂದು=ಚಿಕ್ಕಂದಿನಲ್ಲಿ; ಉಂಗುರ+ಇಟ್ಟ; 'ಉಂಗುರವಿಡುವುದು' – ಒಂದು ಬಗೆಯ ಆಚರಣೆ. ಪರಸ್ಪರ ಒಲಿದ ಹೆಣ್ಣುಗಂಡುಗಳು ಒಬ್ಬರ ಕಯ್ ಬೆರಳಿಗೆ ಮತ್ತೊಬ್ಬರು ಉಂಗುರವನ್ನು ತೊಡಿಸಿ, ಮುಂದೆ ತಾವಿಬ್ಬರು ಮದುವೆಯಾಗಲಿರುವುದನ್ನು ನಿಶ್ಚಯ ಮಾಡಿಕೊಳ್ಳುತ್ತಾರೆ;

ಸಾಲ್ವಲನ್+ಎಂಬ; ಅರಸನ+ಅಲ್ಲಿಗೆ; ಪೋಗಿ=ಹೋಗಿ;

**ತನಗೆ ಕಿಱಿಯಂದು ಉಂಗುರವಿಟ್ಟ ಸಾಲ್ವಲನೆಂಬ ಅರಸನಲ್ಲಿಗೆ ಪೋಗಿ**=ತನಗೆ ಚಿಕ್ಕಂದಿನಲ್ಲಿ ಉಂಗುರನ್ನು ತೊಡಿಸಿದ್ದ ಸಾಲ್ವಲನೆಂಬ ರಾಜನ ಬಳಿಗೆ ಬಂದು;

ಕೈಕೊಳ್=ಸ್ವೀಕರಿಸು/ಪಡೆಯುವುದು; ವೇಳ್ಕುಮ್=ಬೇಕು;

**ನೀನ್ ಎನ್ನನ್ ಕೈಕೊಳವೇಳ್ಕುಮ್**=ನೀನು ನನ್ನನ್ನು ಮದುವೆಯಾಗಬೇಕು;

ಬಂಡಣ+ಒಳ್; ಬಂಡಣ=ಕಾಳಗ/ಹೋರಾಟ; ಸರಿತ್+ಸುತನ್; ಸರಿತ್=ಗಂಗೆ; ಸುತ=ಮಗ; ಸರಿತ್ಸುತ=ಗಂಗಾದೇವಿಯ ಮಗನಾದ ಗಾಂಗೇಯ; ಕೊಂಡು+ಉಯ್ದನ್; ಕೊಂಡು=ಅಪಹರಿಸಿ; ಉಯ್ದನ್=ಒಯ್ದನು;

**ಆ ಬಂಡಣದೊಳ್ ಸರಿತ್ಸುತನ್ ಎನ್ನನ್ ಓಡಿಸಿ ನಿನ್ನನ್ ಕೊಂಡುಯ್ದನ್**= ನಿನ್ನ ಸ್ವಯಂವರದ ಸಮಯದಲ್ಲಿ ನಡೆದ ಕಾಳಗದಲ್ಲಿ ಗಾಂಗೇಯನು ನನ್ನನ್ನು ಹೊಡೆದೋಡಿಸಿ ನಿನ್ನನ್ನು ಅಪಹರಿಸಿಕೊಂಡು ಹೋದನು;

ಅದಱಿನ್=ಆದ್ದರಿಂದ; ಪೆಂಡತಿ+ಎನ್; ಪೆಂಡತಿ=ಹೆಣ್ಣು; ಆದೆನ್=ಆಗಿದ್ದೇನೆ;

**ಪೆಂಡತಿಯೆನ್ ಆದೆನ್**=ನಾನು ಕೂಡ ಹೆಣ್ಣಾಗಿದ್ದೇನೆ ಎಂಬುದು ಒಂದು ರೂಪಕವಾಗಿ ಬಳಕೆಯಾಗಿದೆ. ಹೋರಾಟದಲ್ಲಿ ಗಂಡಾದವನು ಹಗೆಯ ಎದುರಾಗಿ ಗೆಲ್ಲಬೇಕು ಇಲ್ಲವೇ ಸಾಯಬೇಕು. ಬದುಕಿ ಉಳಿದರೆ ಆತ ಹೆಣ್ಣಿಗೆ ಸಮಾನ ಎಂಬ ನಿಲುವು ಸಮಾಜದಲ್ಲಿದೆ;

**ಅದಱಿಂ ಪೆಂಡತಿಯೆನ್ ಆದೆನ್**=ಗಾಂಗೇಯನಿಂದ ಸೋಲನ್ನುಂಡ ಕಾರಣದಿಂದಾಗಿ ನಾನು ಕೂಡ ಹೆಣ್ಣೇ ಆಗಿದ್ದೇನೆ;

ಅದು+ಎಂತು; ಎಂತು=ಯಾವ ರೀತಿ; ಬೆರಸು=ಕೂಡು; ಅಬಲೆ=ಹೆಚ್ಚಿನ ಶಕ್ತಿಯಿಲ್ಲದವಳು;

**ಪೆಂಡಿರ್ ಪೆಂಡಿರೊಳ್ ಅದೆಂತು ಬೆರೆಸುವರ್ ಅಬಲೆ**=ನೀನೇ ಹೇಳು, ಒಂದು ಹೆಣ್ಣು ಮತ್ತೊಂದು ಹೆಣ್ಣಿನ ಜತೆಯಲ್ಲಿ ಅದು ಹೇಗೆ ತಾನೆ ಮದುವೆಯಾಗಲು ಆಗುತ್ತದೆ;

ಪರಿಭವ=ಸೋಲು; ಸಿಗ್ಗು=ಅವಮಾನ; ಸಾಲ್ವಿನಮ್=ವಿವರವಾಗಿ;

**ಸಾಲ್ವಲನ್ ಪರಿಭವದೊಳ್ ಆದ ತನ್ನ ಸಿಗ್ಗನ್ ಸಾಲ್ವಿನವ್ ಉಂಟು ಮಾಡಿದೊಡೆ**=ಕಾಳೆಗದಲ್ಲಿ ಗಾಂಗೇಯನಿಂದ ಉಂಟಾದ ಸೋಲಿನಿಂದ ತನ್ನ ಮನಸ್ಸಿಗೆ ಉಂಟಾದ ನೋವನ್ನು ಸಾಲ್ವಲನು ವಿವರವಾಗಿ ಅಂಬೆಯೊಡನೆ ಹೇಳಿಕೊಂಡಾಗ;

ಒಡಂಬಡಿಸಲ್+ಆಱದೆ; ಒಡಂಬಡಿಸು=ಒಪ್ಪಿಸು;

**ಆತನ ಮನಮನ್ ಒಡಂಬಡಿಸಲಾಱದೆ**=ಅವನ ಮನಸ್ಸನ್ನು ಒಲಿಸಿಕೊಳ್ಳಲಾಗದೆ;

**ಪರಶುರಾಮನಲ್ಲಿಗೆ ಪೋಗಿ**=ಗಾಂಗೇಯನ ಗುರುಗಳಾಗಿದ್ದ ಪರಶುರಾಮನ ಬಳಿಗೆ ಹೋಗಿ;

ನೆರೆ=ಸೇರು/ಜತೆಗೂಡು; ಮಕ್ಕಳ್+ಎಲ್ಲರುಮನ್;

**ಎನ್ನ ಸ್ವಯಂವರದೊಳ್ ನೆರೆದ ಅರಸು ಮಕ್ಕಳೆಲ್ಲರುಮನ್ ಭೀಷ್ಮನ್ ಓಡಿಸಿ**=ನನ್ನನ್ನು ಮದುವೆಯಾಗಲೆಂದು ಸ್ವಯಂವರ ಮಂಟಪದಲ್ಲಿ ನೆರೆದಿದ್ದ ಅರಸು ಮಕ್ಕಳೆಲ್ಲರನ್ನೂ ಭೀಷ್ಮನು ಓಡಿಸಿ;

**ಎನ್ನನ್ ಕೊಂಡುಬಂದು**=ನನ್ನನ್ನು ಅಪಹರಿಸಿಕೊಂಡು ಬಂದು;

ನಿಲ್=ಆಗು; ಒಲ್ಲದೆ=ಇಚ್ಛಿಸದೆ; ಅಟ್ಟು=ಓಡಿಸು; ಕಳೆ=ಬಿಡು/ತೊರೆ;

**ಮದುವೆಯಮ್ ನಿಲಲ್ ಒಲ್ಲದೆ ಅಟ್ಟಿ ಕಳೆದೊಡೆ**=ನನ್ನನ್ನು ಮದುವೆಯಾಗಲು ಒಲ್ಲದೆ ತೊರೆದಿರುವುದರಿಂದ;

ದೆವಸ=ದಿನ; ಜವ್ವನ=ಯೌವನ; ಅಡವಿ+ಒಳಗೆ; ಅಡವಿ=ಕಾಡು; ಪೂತ=ಅರಳಿದ; ಕಿಡು=ನಾಶವಾಗು/ಹಾಳಾಗು; ಈ=ಅವಕಾಶವನ್ನು ನೀಡು; ಈಯದೆ=ಅವಕಾಶವನ್ನು ಕೊಡದೆ;

**ಎನ್ನ ದೆವಸಮುಮ್ ಜವ್ವನಮುಮ್ ಅಡವಿಯೊಳಗೆ ಪೂತ ಪೂವಿನಂತೆ ಕಿಡಲ್**

**ಈಯದೆ**=ಕಾಡಿನೊಳಗೆ ಅರಳಿದ ಹೂವು ಯಾರ ಮುಡಿಗೂ ಸೇರದೆ ಕೆಳಕ್ಕೆ ಬಿದ್ದು ಹಾಳಾಗುವಂತೆ ಜೀವನದಲ್ಲಿ ನನ್ನ ಹರೆಯ ಮತ್ತು ಆಯುಸ್ಸು ಹಾಳಾಗಲು ಅವಕಾಶವನ್ನು ನೀಡದೆ;

**ಆತನನ್ ಎನ್ನನ್ ಪಾಣಿಗ್ರಹಣಮ್ ಗೆಯ್ವಂತು ಮಾಡು**=ಅವನು ನನ್ನನ್ನು ಮದುವೆಯಾಗುವಂತೆ ಮಾಡು;

ಮಾಡಲ್+ಆಱದೊಡೆ; ಕಿಚ್ಚು=ಬೆಂಕಿ;

**ಮಾಡಲಾಱದೊಡೆ ಕಿಚ್ಚಮ್ ದಯೆಗೆಯ್ವುದು**=ಗಾಂಗೇಯನೊಡನೆ ನನ್ನ ಮದುವೆಯನ್ನು ಮಾಡುವುದಕ್ಕೆ ನಿನ್ನಿಂದ ಆಗದಿದ್ದರೆ ನನಗೆ ಸಾವನ್ನಾದರೂ ಕರುಣಿಸು;

**ಎಂದು ಅಂಬೆ ಕಣ್ಣ ನೀರನ್ ತುಂಬೆ**=ಎಂದು ಮೊರೆಯಿಡುತ್ತ ಅಂಬೆಯ ಅಳತೊಡಗಿದಳು; ಅತ್ತ ತಾನು ಒಲಿದಿದ್ದ ಸಾಲ್ವಲನನ್ನು ಪಡೆಯಲಾಗದೆ, ಇತ್ತ ಗಾಂಗೇಯನನ್ನು ಮದುವೆಯಾಗಲಾಗದೆ ಸಂಕಟದಿಂದ ಬೇಯುತ್ತಿರುವ ಅಂಬೆಯ ಕಣ್ಣಾಲಿಗಳಲ್ಲಿ ನೀರು ತುಂಬಿ ಬಂತು;

ನಯ=ನ್ಯಾಯ/ವಿವೇಕ/ನೀತಿ; ನಂಬು=ನೆಚ್ಚು/ನೆಮ್ಮು;

**ನಯಮಮ್ ನಂಬುವೊಡೆ ಎನ್ನ ಪೇೞ್ದ ಸತಿಯನ್ ಕೈಕೊಂಡನ್**=ವಿವೇಕದಿಂದ ನಡೆದುಕೊಳ್ಳುವುದೇ ಸರಿಯೆಂದು ಗಾಂಗೇಯನು ಅರಿತುಕೊಂಡರೆ ನಾನು ಹೇಳಿದ ಹೆಣ್ಣನ್ನು ಮದುವೆಯಾಗುತ್ತಾನೆ;

ಅಂತು+ಅಲ್ಲದೆ; ಅಂತಲ್ಲದೆ=ಹಾಗಲ್ಲದೆ: ಮೀಱಿ=ಕಡೆಗಣಿಸಿ; ಮೇಣ್=ಇಲ್ಲವೇ; ದುರ್ನಯ=ಕೆಟ್ಟ ನಿಲುವು/ತಪ್ಪು ನಿರ್ಣಯ/ಸರಿಯಲ್ಲದ ತೀರ್ಮಾನ; ನಚ್ಚು=ನಂಬು/ಅವಲಂಬಿಸು;

**ಅಂತಲ್ಲದೆ ಮೀಱಿ ಮೇಣ್ ದುರ್ನಯಮನ್ ನಚ್ಚುವೊಡೆ**=ನಾನು ಹೇಳಿದ ಹೆಣ್ಣನ್ನು ಮದುವೆಯಾಗದೆ, ನನ್ನ ಮಾತಿಗೆ ಎದುರಾದ ನಿಲುವನ್ನು ತಳೆದರೆ;

ಉಗ್ರ=ಪ್ರಚಂಡ; ರಣ+ಒಳ್; ಮಾರ್=ಎದುರಾಗು/ಪ್ರತಿಭಟಿಸು;

**ಎನ್ನನ್ ಉಗ್ರ ರಣದೊಳ್ ಮಾರ್ಕೊಂಡನ್**=ಪ್ರಚಂಡವಾದ ಕಾಳೆಗದಲ್ಲಿ ನನ್ನನ್ನು ಎದುರುಗೊಳ್ಳುತ್ತಾನೆ;

ಸುತ=ಮಗ; ಆರಯ್=ಯೋಚಿಸು/ಚಿಂತಿಸು; ಕಜ್ಜ=ಕಾರ್ಯ/ಕೆಲಸ; ಪೆಱತು+ಇಲ್ಲ; ಪೆಱತು=ಮತ್ತೊಂದು/ಬೇರೆ;

**ಶಂತನು ಸುತಂಗೆ ಆರಯೆ ಕಜ್ಜಮ್ ಪೆಱತಿಲ್ಲ**=ಯಾವ ರೀತಿಯಲ್ಲಿ ಚಿಂತಿಸಿ ನೋಡಿದರೂ ಈಗ ಗಾಂಗೇಯನಿಗೆ ಬೇರೆ ದಾರಿಯೇ ಇಲ್ಲ. ನನ್ನ ಮಾತಿಗೆ ಮನ್ನಣೆಯನ್ನು

ನೀಡಿ ಗಾಂಗೇಯನು ಅಂಬೆಯನ್ನು ಮದುವೆಯಾಗಬೇಕು ಇಲ್ಲವೇ ನನ್ನೊಡನೆ ಕಾಳಗವನ್ನು ಮಾಡಬೇಕು;

ಕರಂ=ಬಹಳವಾಗಿ/ಹೆಚ್ಚಾಗಿ; ವಿವಾಹ+ವಿಧಿ+ಅನ್; ವಿಧಿ=ಆಚರಣೆ;

**ಎನ್ನನ್ ಕರಮ್ ನಂಬಿದ ಅಂಬೆಯೊಳ್ ವಿವಾಹವಿಧಿಯನ್**=ನನ್ನನ್ನು ಬಹಳವಾಗಿ ನಂಬಿ ಬಂದಿರುವ ಅಂಬೆಯ ಮದುವೆಯ ಕಾರ್ಯವನ್ನು;

ಅಂಬು=ಬಾಣ; ವಲಮ್=ನಿಶ್ಚಯವಾಗಿಯೂ; ಮಾಳ್ಪೆನ್=ಮಾಡುತ್ತೇನೆ;

**ಎನ್ನ ಅಂಬೆ ವಲಮ್ ಮಾಳ್ಪೆನ್**=ನನ್ನ ಬಾಣದ ಮೂಲಕವೇ ಮಾಡುತ್ತೇನೆ. ಅಂದರೆ ನನ್ನ ಪರಾಕ್ರಮದಿಂದ ಗಾಂಗೇಯನ್ನು ಮಣಿಸಿ, ಈ ಮದುವೆಯನ್ನು ನಡೆಸುತ್ತೇನೆ;

**ಪೆಱರ್ ಮಾಳ್ಪರೇ ಎಂದು**=ಬೇರೆಯವರಿಂದ ಈ ಮದುವೆಯನ್ನು ಮಾಡಲಾಗುತ್ತದೆಯೇ, ಅಂದರೆ ನನ್ನಿಂದ ಮಾತ್ರ ನೆರವೇರುತ್ತದೆ ಎಂದು ನಿಶ್ಚಯಿಸಿ;

ನಾಗಪುರ=ಹಸ್ತಿನಾವತಿ; ವರ್ಪ=ಬರುತ್ತಿರುವ; ಬರವನ್=ಆಗಮನದ ಸುದ್ದಿಯನ್ನು;

**ನಾಗಪುರಕ್ಕೆ ವರ್ಪ ಪರಶುರಾಮನ ಬರವನ್ ಗಾಂಗೇಯನ್ ಕೇಟ್ಟು**= ಹಸ್ತಿನಾವತಿಯತ್ತ ಬರುತ್ತಿರುವ ಪರಶುರಾಮನ ಆಗಮನದ ಸುದ್ದಿಯನ್ನು ಕೇಳಿ ತಿಳಿದ ಗಾಂಗೇಯನು;

ಇದಿರ್+ಬಂದು; ಇದಿರು=ಮುಂದೆ; ಕನಕ=ಚಿನ್ನ; ರಜತ=ಬೆಳ್ಳಿ; ಪಾತ್ರ=ತಟ್ಟೆ/ ಬಟ್ಟಲು; ಅರ್ಘ್ಯ=ಮನೆಗೆ ಬಂದ ಗುರುಹಿರಿಯರಿಗೆ ಕೈಕಾಲು ತೊಳೆಯಲು ಕೊಡುವ ನೀರು; ಪೊಡಮಡು=ನಮಸ್ಕರಿಸು/ಅಡ್ಡಬೀಳು;

**ಇದಿರ್ವಂದು ಕನಕ ರಜತ ಪಾತ್ರಂಗಳೊಳ್ ಅರ್ಘ್ಯಮನ್ ಕೊಟ್ಟು ಪೊಡಮಟ್ಟು**=ಚಿನ್ನದ ಮತ್ತು ಬೆಳ್ಳಿಯ ತಟ್ಟೆ ಬಟ್ಟಲುಗಳಲ್ಲಿ ನೀರನ್ನು ನೀಡಿ ಗುರುಗಳ ಸೇವೆಯನ್ನು ಮಾಡಿ ನಮಸ್ಕರಿಸಿ;

ಬೆಸನ=ಕೆಲಸ/ಅಪ್ಪಣೆ/ಆದೇಶ;

**ಬೆಸನ್ ಏನ್**=ನನ್ನಿಂದ ಯಾವ ಕೆಲಸವಾಗಬೇಕು ಹೇಳಿರಿ;

**ಪೇಳ್ವೆನ್ ಎನ್ನ ಬೆಸನಮ್ ಕೈಕೊಳ್ವುದು**=ಹೇಳುತ್ತೇನೆ. ಅದರಂತೆ ನಾನು ಹೇಳಿದ ಕೆಲಸವನ್ನು ನೀನು ಮಾಡುವುದು;

ಪಸುರ್+ಪಂದರ್; ಪಸುರ್=ಹಸಿರು; ಪಂದರ=ಚಪ್ಪರ; ಪಸುರ್ವಂದರ್= ಹಸಿರಾದ ಎಲೆಗಳಿಂದ ಕೂಡಿದ ಗರಿಗಳನ್ನು ಹೆಣೆದು ಮಾಡಿರುವ ಚಪ್ಪರ; ಪಸೆ+ಎಂಬ;

ಪಸೆ=ಹಸೆಮಣೆ; ಸಮೆ=ಅಣಿಗೊಳಿಸುವುದು/ಸಜ್ಜುಗೊಳಿಸುವುದು; ಇವಮ್=ಇವನ್ನು; ಸಮೆದು=ರಚಿಸಿ;

**ಪಸುರ್ವಂದರ್ ಪಸೆಯೆಂಬ ಇವಮ್ ಸಮೆದು**=ಹಸಿರಿನ ತಳಿರು ತೋರಣಗಳಿಂದ ಕೂಡಿರುವ ಚಪ್ಪರವನ್ನು ಹಾಕಿ, ಮದುಮಕ್ಕಳು ಕುಳಿತುಕೊಳ್ಳಲು ಬೇಕಾದ ಹಸೆಮಣೆಗಳನ್ನು ಇಟ್ಟು;

**ಈ ಕನ್ನೆಯನ್ ನೀನ್ ಕೈಕೊಳ್**= ಈ ತರುಣಿಯನ್ನು ನೀನು ಮದುವೆಯಾಗು;

ಚಿತ್ತ+ಒಳ್; ಚಿತ್ತ=ಮನಸ್ಸು; ಕೊಳಲ್ಕೆ+ಆಗದ; ಬೆಸಕ=ವಿಚಾರ/ಆಲೋಚನೆ;

**ಚಿತ್ತದೊಳ್ ಕೊಳಲ್ಕಾಗದ ಬೆಸಕಮ್ ಉಳ್ಳೊಡೆ**=ಇವಳನ್ನು ಮದುವೆಯಾಗ ಬಾರದೆಂಬ ಆಲೋಚನೆಯು ನಿನ್ನ ಮನಸ್ಸಿನಲ್ಲಿದ್ದರೆ;

ಓವು=ಪ್ರೀತಿ/ಒಲವು; ಓವದೆ=ಪ್ರೀತಿಯನ್ನು ತೊರೆದು/ಲೆಕ್ಕಿಸದೆ;

**ಇವರ್ ಎಮ್ಮ ಆಚಾರ್ಯರ್ ಎಂದು ಓವದೆ**=ಇವರು ನಮ್ಮ ಗುರುಗಳು ಎನ್ನುವ ಒಲವನ್ನು ತೊರೆದು;

ಮಾಣದೆ=ಸುಮ್ಮನಿರದೆ; ಏರ್+ಬೆಸನಮ್; ಏರ್=ಕಾಳೆಗ; ಏರ್ವೆಸನ= ಕಾಳೆಗವನ್ನು ಮಾಡುವುದು; ಕೈದು=ಶಸ್ತ್ರ/ಹತಾರ;

**ಮಾಣದೆ ಏರ್ವೆಸನಮ್ ಕೈದುಗೊಳ್**=ಗುರುವೆಂದು ಹಿಂಜರಿಯದೆ ಆಯುಧವನ್ನು ಹಿಡಿದು ಹೋರಾಡು;

ಮೆಚ್ಚು=ಒಪ್ಪು/ಸಮ್ಮತಿಸು; ಮೆಚ್ಚಿತ್ತು=ಒಪ್ಪುಗೆಯಾದುದು;

**ಎರಡಱೊಳ್ ಮೆಚ್ಚಿತ್ತು ಏನ್ ಎಂದಪಯ್**=ಅಂಬೆಯನ್ನು ಮದುವೆಯಾಗು ಇಲ್ಲವೇ ನನ್ನೊಡನೆ ಹೋರಾಡು, ಇವೆರಡರಲ್ಲಿ ನಿನ್ನ ಆಯ್ಕೆ ಯಾವುದು... ಇದಕ್ಕೆ ನೀನೇನು ಹೇಳುತ್ತೀಯೆ.

ಶ್ರೀ=ಲಕ್ಷ್ಮಿ; ವ್ಯಕ್ತಿಯ ಬಳಿಯಿರುವ ಭೂಮಿ, ಬೆಲೆಬಾಳುವ ಒಡವೆ ವಸ್ತು ಹಣ, ರಾಜ್ಯದ ಒಡೆತನದ ಗದ್ದುಗೆ ಮುಂತಾದ ಸಂಪತ್ತಿಗೆ ಜನಸಮುದಾಯ ಲಕ್ಷ್ಮಿ ಎಂಬ ಹೆಣ್ಣು ದೇವತೆಯನ್ನು ಕಲ್ಪಿಸಿಕೊಂಡಿದೆ; ಅದನ್ನು ಇಲ್ಲಿ ವ್ಯಕ್ತಿಯ ಪರಾಕ್ರಮಕ್ಕೆ ಮತ್ತು ಕೀರ್ತಿಗೂ ವಿಸ್ತರಿಸಲಾಗಿದೆ; ಅಲ್ಲದೆ=ಬಿಟ್ಟು; ಮೋಱ+ಅಲ್ಲ; ಮೋಱ=ನಂಟು; ಮೋಱಯಲ್ಲ=ನಂಟಿಲ್ಲ;

**ಎನಗೆ ವೀರಶ್ರೀಯುಮ್ ಕೀರ್ತಿಶ್ರೀಯುಮ್ ಅಲ್ಲದೆ ಉಳಿದ ಪೆಂಡಿರ್ ಮೋಱಯಲ್ಲ** =ನನಗೆ ವೀರಲಕ್ಷ್ಮಿ ಮತ್ತು ಕೀರ್ತಿಲಕ್ಷ್ಮಿ ಎಂಬ ಹೆಣ್ಣುಗಳೊಡನೆ ನಂಟು ಇದೆಯೇ ಹೊರತು ಉಳಿದ ಯಾವ ಹೆಣ್ಣುಗಳ ಜತೆಯಲ್ಲೂ ನನಗೆ ನಂಟಿಲ್ಲ;

ಆಗ್ರಹಂ+ಗೆಯ್ವಿರಿ; ಆಗ್ರಹ=ಒತ್ತಾಯ/ಬಲವಂತ;

**ಇದನ್ ಏಕೆ ಆಗ್ರಹಂ ಗೆಯ್ವಿರಿ**=ಈ ರೀತಿ ಏಕೆ ಬಲವಂತ ಮಾಡುತ್ತಿರುವಿರಿ; ಕೆಳರ್ದು=ಕೆರಳಿ/ಉದ್ರಿಕ್ತನಾಗಿ; ಎಂತುಮ್=ಹೇಗಾದರೂ; ಎಮ್ಮೊಳ್=ನಮ್ಮೊಡನೆ; ಕಾದಲ್+ವೇಳ್ವುದು; ಕೆಳರ್=ಕೋಪಿಸು/ಕನಲು;

**ಎಂತುಮ್ ಎಮ್ಮೊಳ್ ಕಾದಲ್ವೇಳುದು ಎಂದು ಕೆಳರ್ದು**=ಹಾಗೆ ಹೇಳುವುದಾದರೆ ನೀನು ನಮ್ಮೊಡನೆ ಕಾಳಗವನ್ನು ಮಾಡು ಎಂದು ಪರಶುರಾಮನು ಕೋಪದಿಂದ ಕೆರಳಿ;

ಉಗ್ರ=ಪ್ರಚಂಡವಾದ; ರಣ+ಆಗ್ರಹ; ರಣ=ಕಾಳೆಗ; ಆಗ್ರಹ=ಮೇಲೆ ಬೀಳುವುದು; ಪ್ರಣಯ=ಅನುರಾಗ/ಮೋಹ; ರಣಾಗ್ರಹ ಪ್ರಣಯ=ಕಾಳೆಗವನ್ನು ಮಾಡಲೇಬೇಕೆಂಬ ಸಂಕಲ್ಪದಿಂದ;

**ಉಗ್ರ ರಣಾಗ್ರಹ ಪ್ರಣಯದಿಂದ ಆಗಳ್ ಕುರುಕ್ಷೇತ್ರಮಮ್ ಕಳಮ್ ಪೇಳ್ದು** =ದೊಡ್ಡದಾಗಿ ಹೋರಾಡಲೇಬೇಕೆಂಬ ಉದ್ದೇಶದಿಂದ ಕುರುಕ್ಷೇತ್ರವನ್ನು ರಣರಂಗವನ್ನಾಗಿ ಗೊತ್ತುಪಡಿಸಿ;

ಇರ್ವರುಮ್=ಇಬ್ಬರೂ; ಐಂದ್ರ=ಇಂದ್ರನ ಹೆಸರಿನ ಬಾಣ; ವಾರುಣ= ವರುಣದೇವನ ಹೆಸರಿನ ಬಾಣ; ವಾಯವ್ಯ+ಆದಿ; ವಾಯವ್ಯ= ವಾಯುದೇವನ ಹೆಸರಿನ ಬಾಣ; ಆದಿ=ಮೊದಲಾದ; ದಿವ್ಯ+ಅಸ್ತ್ರ; ದಿವ್ಯ=ಉತ್ತಮವಾದ; ಅಸ್ತ್ರ=ಬಾಣ; ಸಂಕುಲ=ಸಮೂಹ; ಎಚ್ಚು=ಬಾಣ ಪ್ರಯೋಗ ಮಾಡು;

**ಇರ್ವರುಮ್ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರ ಸಂಕುಲದಿಂದ ಒರ್ವರನ್ ಒರ್ವರ್ ಎಚ್ಚು**=ಒಬ್ಬರು ಮತ್ತೊಬ್ಬರ ಮೇಲೆ ಇಂದ್ರ, ವರುಣ, ವಾಯವ್ಯ ಎಂಬ ಹರಿತವಾದ ಬಾಣಗಳನ್ನು ಬಿಡುತ್ತಿರುವಾಗ; ನಿಜ=ತನ್ನ; ಪೀಠ+ಅಂಭೋಜದಿನ್; ಪೀಠ=ಗದ್ದುಗೆ; ಅಂಭೋಜ=ತಾವರೆ; ಉಚ್ಚಳಿಪ+ಅನ್ನಮ್; ಉಚ್ಚಳಿಪ+ಅನ್ನಮ್; ಉಚ್ಚಳಿಸು= ಮೇಲೆ ನೆಗೆ/ಚಿಮ್ಮು/ಹಾರು; ಅನ್ನಮ್=ಹಾಗೆ;

**ನಿಜ ಪೀಠಾಂಭೋಜದಿನ್ ಬ್ರಹ್ಮನ್ ಉಚ್ಚಳಿಪನ್ನಮ್**=ತಾವರೆಯ ಪೀಠದಲ್ಲಿ ಕುಳಿತಿದ್ದ ಬ್ರಹ್ಮದೇವನೇ ಮೇಲಕ್ಕೆ ಹಾರಿಬೀಳುವ ಹಾಗೆ; ಇದೊಂದು ರೂಪಕ. ಕಾಳೆಗದಿಂದ ಉಂಟಾಗುತ್ತಿರುವ ತೀವ್ರ ಪರಿಣಾಮ ಸೂಚಿಸುತ್ತದೆ;

ತ್ರೈಲೋಕ್ಯ+ಒಳ್; ತ್ರೈಲೋಕ್ಯ=ಮೂರು ಲೋಕಗಳು; ಪಿರಿದು+ಒಂದು; ಸಂಕಟಮ್+ಅನ್;

**ಈ ತ್ರೈಲೋಕ್ಯದೊಳ್ ಪಿರಿದೊಂದು ಸಂಕಟಮನ್ ಮಾಡಿದರ್=** ದೇವಲೋಕ, ಭೂಲೋಕ, ಪಾತಾಳಲೋಕವೆಂಬ ಮೂರು ಲೋಕಗಳಲ್ಲಿ ಅತಿ ಹೆಚ್ಚಿನ ಸಂಕಟವನ್ನು ಉಂಟುಮಾಡಿದರು;

ವಿಕ್ರಾಂತ=ಪರಾಕ್ರಮ; ಅತರ್ಕ್ಯಮ್=ತರ್ಕಕ್ಕೆ ಸಿಗದು;

**ವಿಕ್ರಾಂತಮ್ ಭುಜಬಲಮ್ ಅಸಾಮಾನ್ಯಮ್ ಅಧಿಕಮ್ ಅತರ್ಕ್ಯಮ್=** ಗಾಂಗೇಯನ ಪರಾಕ್ರಮ, ಬಾಹುಬಲ ತುಂಬ ದೊಡ್ಡದು ಹಾಗೂ ಅಸಾಮಾನ್ಯವಾದುದು ಮಾತ್ರವಲ್ಲ, ಊಹಾತೀತವಾದುದು ಅಂದರೆ ಮಾತಿಗೆ ನಿಲುಕದ್ದು;

ಈತಂಗೆ=ಇವನಿಗೆ; ಎಣೆ=ಸಮಾನ; ದಿವಜ=ದೇವತೆ; ಪೋಗು=ಹೋಗು/ಬಿಡು;

**ಈತಂಗೆ ಎಣೆಯೆ ದಿವಜರ್ ಪೋಗು**=ಈತನಿಗೆ ದೇವತೆಗಳು ಸಮರಲ್ಲ. ಪರಶುರಾಮನು ಗೆಲುತ್ತಾನೆ ಎಂಬ ಮಾತನ್ನು ಬಿಡು; ಗಾಂಗೇಯ ಮತ್ತು ಪರಶುರಾಮನ ನಡುವೆ ನಡೆಯುತ್ತಿರುವ ಕಾಳೆಗವನ್ನು ನೋಡುತ್ತಿರುವವರು ಗಾಂಗೇಯನ ಬಗ್ಗೆ ಈ ಬಗೆಯ ಮೆಚ್ಚುಗೆಯನ್ನು ವ್ಯಕ್ತಪಡಿಸಿರುವಂತೆ ಚಿತ್ರಿಸಲಾಗಿದೆ;

ವಾಯುಪಥದೊಳ್=ಗಗನ ಮಾರ್ಗದಲ್ಲಿ; ಶಿತ+ಅಸ್ತ್ರಂ+ಗಳ್; ಶಿತ=ಹರಿತವಾದ/ಚೂಪಾದ; ಪೊಂಕಮ್+ಕಿಡಿಸೆ; ಪೊಂಕ=ಸೊಕ್ಕು/ಅಹಂಕಾರ; ಕಿಡಿಸೆ=ನಾಶಮಾಡಲು/ಅಡಗಿಸಲು; ಭಾರ್ಗವನ್=ಪರಶುರಾಮನು; ಸುಗಿದನ್=ಹಿಮ್ಮೆಟ್ಟಿದನು/ಹಿಂಜರಿದನು;

**ವಾಯುಪಥದೊಳ್ ಶಿತಾಸ್ತ್ರಂಗಳ್ ಪೊಂಕಂಗಿಡಿಸೆ ಭಾರ್ಗವನ್ ಸುಗಿದನ್** =ಗಗನದಲ್ಲಿ ಹಾರಿಬರುತ್ತಿರುವ ಗಾಂಗೇಯನ ಹರಿತವಾದ ಬಾಣಗಳ ಪೆಟ್ಟಿನಿಂದ ಪರಶುರಾಮನು ಬಲಗುಂದಿ ಹಿಮ್ಮೆಟ್ಟಿದನು;

ಅದಿರು=ನಡುಗು/ಕಂಪಿಸು; ನಿಲ್ವ+ಅನ್ನರ್; ಅನ್ನರ್=ಅಂತಹ ವ್ಯಕ್ತಿಗಳು;

**ಇದೇನ್ ಪ್ರತಿಜ್ಞಾಗಾಂಗೇಯಂಗೆ ಅದಿರದೆ ಇದಿರ್ ನಿಲ್ವನ್ನರ್ ಒಳರೇ**=ಯಾವ ಹೆಣ್ಣನ್ನು ಮದುವೆಯಾಗುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವ ಗಾಂಗೇಯನಿಗೆ ಹೆದರದೆ ಎದುರು ನಿಂತು ಹೋರಾಡುವವರು ಯಾರಾದರೂ ಇದ್ದಾರೆಯೇ;

ಬಸವಳಿದು=ಬಲವು ಕುಗ್ಗಿ/ಶಕ್ತಿಯು ಅಡಗಿ; ಉಸಿರಲ್+ಅಪ್ಪೊಡಮ್; ಉಸಿರಲ್=ಉಸಿರಾಡಲು; ಅಪ್ಪೊಡಮ್=ಆದರೂ; ಆರದೆ=ಶಕ್ತನಾಗದೆ; ಮೂರ್ಛೆ+ಪೋಗಿ+ಇರ್ದನನ್;

**ಅಂತು ಗಾಂಗೇಯನೊಳ್ ಪರಶುರಾಮನ್ ಕಾದಿ ಬಸವಳಿದು ಉಸಿರಲಪ್ಪೊಡಮ್ ಆರದೆ ಮೂರ್ಛೆವೋಗಿರ್ದನನ್ ಕಂಡು**=ಆ ಬಗೆಯಲ್ಲಿ ಗಾಂಗೇಯನೊಡನೆ ಕಾದಾಡಿ

ದೇಹದ ಬಲವು ಕುಗ್ಗಿ ಉಸಿರಾಡಲೂ ಆಗದೆ, ಮಯ್ ಮೇಲಿನ ಅರಿವನ್ನು ಕಳೆದುಕೊಡು ಕೆಳಕ್ಕೆ ಉರುಳಿದ ಪರಶುರಾಮನನ್ನು ನೋಡಿ;

ಕೋಪ+ಅಗ್ನಿ+ಇಂದಮ್; ದಂಡುರುಂಬೆ=ದಿಟ್ಟೆಯಾದ ಹೆಣ್ಣು/ಎದೆಗಾತಿ/ ಕೆಚ್ಚುಳ್ಳವಳು; ವಧಾ+ಅರ್ಥಮ್+ಆಗಿ; ವಧಾ=ಕೊಲ್ಲುವುದು; ಅರ್ಥ=ಉದ್ದೇಶ/ಗುರಿ;

ಪುಟ್ಟುವೆನ್+ಅಕ್ಕೆ; ಅಕ್ಕೆ=ಆಗಲಿ; ಪುಟ್ಟುವೆನಕ್ಕೆ=ಹುಟ್ಟುತ್ತೇನೆ; ಅಗ್ನಿ=ಬೆಂಕಿ; ಅಗ್ನಿಶರೀರೆ=ಬೆಂಕಿಗೆ ತನ್ನ ದೇಹವನ್ನು ಒಡ್ಡಿಕೊಂಡು;

**ಕೋಪಾಗ್ನಿಯಿಂದಮ್ ಅಂಬೆಯೆಂಬ ದಂಡುರುಂಬೆ ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆ ಎಂದು ಅಗ್ನಿಶರೀರೆಯಾಗಿ**= ಹತಾಶೆಯಿಂದ ಉಂಟಾದ ಕೋಪದಿಂದ ಕೆರಳಿದ ದಿಟ್ಟತನದ ವ್ಯಕ್ತಿತ್ವವುಳ್ಳ ಅಂಬೆಯು "ನಿನ್ನ ಸಾವಿಗೆ ಕಾರಣಳಾಗುವಂತೆ ಮತ್ತೊಮ್ಮೆ ಹುಟ್ಟಿಬರುತ್ತೇನೆ." ಎಂದು ಗಾಂಗೇಯನ ಮುಂದೆ ಕೂಗಿ ಹೇಳುತ್ತ ಬೆಂಕಿಗೆ ಬಿದ್ದು ಸಾವನ್ನಪ್ಪಿದಳು;

**ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ**= ಪಾಂಚಾಳ ದೇಶದ ರಾಜ ದ್ರುಪದನ ಪಟ್ಟದ ರಾಣಿಗೆ ಮಗನಾಗಿ ಹುಟ್ಟಿ;

ಕಾರಣ+ಅಂತರ+ಒಳ್; ಶಿಖಂಡಿ+ಆಗಿ+ಇರ್ದಳ್; ಶಿಖಂಡಿ=ನಪುಂಸಕ;

**ಕಾರಣಾಂತರದೊಳ್ ಶಿಖಂಡಿಯಾಗಿರ್ದಳ್**=ಕಾರಣಾಂತರಗಳಿಂದ ನಪುಂಸಕನಾಗಿ ಬದಲಾದಳು.

✦

## ಅಂಬೆ ಪ್ರಸಂಗ

## ಪಂಪ ಭಾರತ ಪಠ್ಯ–ಪ್ರಥಮಾಶ್ವಾಸ

ವ॥ ಶಂತನುವುಂ ಸತ್ಯವತಿಯುಮನ್ಯೋನ್ಯಾಸಕ್ತಚಿತ್ತರಾಗಿ ಕೆಲವು ಕಾಲಮಿರ್ಪನ್ನೆಗಮವರ ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಂ ಪ್ರತಾಪಿಗಳುಮಾಗಿ ಬಳೆಯುತ್ತಿರ್ಪನ್ನೆಗಂ ಶಂತನು ಪರಲೋಕ ಪ್ರಾಪ್ತನಾದೊಡೆ ಗಾಂಗೇಯಂ ತದುಚಿತ ಪರಲೋಕ ಕ್ರಿಯೆಗಳಂ ಮಾಡಿ ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ ರಾಜ್ಯಂಗೆಯಿಸುತ್ತುಮಿರ್ಪನ್ನೆಗಮೊರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚೆ ಕುರುಕ್ಷೇತ್ರಮಂ ಕಳಂಬೇಟ್ಟು ಕಾದಿ ಸತ್ತೊಡೆ ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ ಮಾಡಿ–

**ಮ॥ ಸಕಳ ಕ್ಷತ್ರಿಯ ಮೋಹದಿಂ ನಿಜಭುಜ ಪ್ರಾರಂಭದಿಂ ಪೋಗಿ ತಾ**
**ಗಿ ಕೆಲರ್ ನೊಂದೊಡೆ ಕಾದಿ ರಾಜಸುತರೊಳ್ ತನ್ನಂಕದೊಂದುಗ್ರಸಾ**
**ಯಕದಿಂ ನಾಯಕರಂ ಪಡಲ್ವಡಿಸುತುಂ ತಾಂ ತಂದನಂದಂಬೆಯಂ**
**ಬಿಕೆಯಂಬಾಲೆಯರೆಂಬ ಬಾಲೆಯರನೇಂ ಭೀಷ್ಮಂ ಯಶೋಭಾಗಿಯೋ. ॥74॥**

ವಚನ। ಅಂತು ತಂದು ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ಕನ್ನೆಯರಂ ಪಾಣಿ ಗ್ರಹಣಂಗೆಯ್ವಾಗಳೆಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ ಗಾಂಗೇಯನಂಬೆಯನಿಂತೆಂದಂ–

**ಉ॥ ಅತ್ತ ಸುರೇಶ್ವರಾವಸಥಮಿತ್ತ ಮಹೀತಳಮುತ್ತ ಪನ್ನಗೋ**
**ದಾತ್ತ ಸಮಸ್ತ ಲೋಕಮಱಿದಂತಿರೆ ಪೂಣ್ದೆನಗಾಗದಂಗಜೋ**
**ತ್ಪತ್ತಿ ಸುಖಕ್ಕೆ ಸೋಲಲಱಿಗುಂ ಪುರುಷವ್ರತವೀಗಳಬ್ಬೆಯೆಂ।**
**ದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ ಪಂಕಜಾನನೇ. ॥75॥**

ವ॥ ಎಂದು ನುಡಿದ ಗಾಂಗೇಯನ ನುಡಿಯೊಳವಸರಮಂ ಪಸರಮಂ ಪಡೆಯದೆ ತನಗೆ ಕಿಱಿಯಂದುಂಗುರವಿಟ್ಟ ಸಾಲ್ವಲನೆಂಬರಸನಲ್ಲಿಗೆ ಪೋಗಿ ನೀನೆನ್ನಂ ಕೈಕೊಳವೇಟ್ಟುಮೆಂದೊಡಾತನಿಂತೆಂದಂ–

**ಕಂ॥ ಬಂಡಣದೊಳೆನ್ನನೋಡಿಸಿ**
**ಕೊಂಡುಯ್ದಂ ನಿನ್ನನಾ ಸರಿತ್ಸುತನಾನುಂ**
**ಪೆಂಡತಿಯೆನಾದೆನದಱಿಂ**
**ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ. ॥76॥**

ವ॥ ಎಂದು ಸಾಲ್ವಲಂ ತನ್ನ ಪರಿಭವದೊಳಾದ ಸಿಗ್ಗಂ ಸಾಲ್ವಿನಮುಂಟುಮಾಡಿದೊಡಾತನ ಮನಮನೊಡಂಬಡಿಸಲಾಱದೆ ಪರಶುರಾಮನಲ್ಲಿಗೆ ಪೋಗಿ ಭೀಷ್ಮನೆನ್ನ ಸ್ವಯಂವರದೊಳ್ ನೆರೆದರಸುಮಕ್ಕಳೆಲ್ಲರುಮನೋಡಿಸಿಕೊಂಡು ಬಂದೆನ್ನಂ ಮದುವೆಯಂ ನಿಲಲೊಲ್ಲದಟ್ಟಿ ಕಳೆದೊಡೆನ್ನ ದೆವಸಮುಂ ಜವ್ವನಮುಮಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದಾತನನೆನ್ನಂ ಪಾಣಿಗ್ರಹಣಂ ಗೆಯ್ವಂತು ಮಾಡು ಮಾಡಲಾಱದೊಡೆ ಕಿಚ್ಚಂ ದಯೆಗೆಯ್ವುದೆಂದಂಬೆ ಕಣ್ಣ ನೀರಂ ತುಂಬೆ–

**ಮ॥ ನಯಮಂ ನಂಬುವೊಡೆನ್ನ ಪೇೞ್ವ ಸತಿಯಂ ಕೈಕೊಂಡನಂತಲ್ಲದು**
**ರ್ಣಯಮಂ ನಚ್ಚುವೊಡೆನ್ನನುಗ್ರ ರಣದೊಳ್ ಮೇಣ್ ಮೀಱಿ ಮಾರ್ಕೊಂಡನಾ**
**ರಯೆ ಕಜ್ಜಂ ಪೆಱತಿಲ್ಲ ಶಂತನು ಸುತಂಗೆನ್ನಂ ಕರಂ ನಂಬಿದಂ**
**ಬೆಯೊಳೆನ್ನಂಬೆವಲಂ ವಿವಾಹವಿಧಿಯಂ ಮಾಳ್ಪಂ ಪೆಱರ್ ಮಾೞ್ಪರೇ. ॥77॥**

ವಚನ॥ ಎಂದು ನಾಗಪುರಕ್ಕೆ ವರ್ಪ ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕ ರಜತ ಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡಮಟ್ಟು–

**ಮ॥ ಬೆಸನೇನೆಂದೊಡೆ ಪೇೞ್ವೆನೆನ್ನ ಬೆಸನಂ ಕೈಕೊಳ್ವುದೀ ಕನ್ನೆಯಂ**
**ಪಸುರ್ವಂದರ್ ಪಸೆಯೆಂಬಿವಂ ಸಮೆದು ನೀಂ ಕೈಕೊಳ್ ಕೊಳಲ್ಕಾಗದೆಂ**
**ಬೆಸಕಂ ಚಿತ್ತದೊಳುಳ್ಳೊಡೀಗಳಿವರೆಮ್ಮಾಚಾರ್ಯರೆಂದೋವದೇ**
**ರ್ವೇಸನಂ ಮಾಣದೆ ಕೈದುಗೊಳ್ಳೆರಡಱೊಳ್ ಮೆಚ್ಚಿತ್ತೆನೇನೆಂದಪಯ್. ॥78॥**

ವ॥ ಎಂದು ನುಡಿದ ಪರಶುರಾಮನ ನುಡಿಯಂ ಗಾಂಗೇಯಂ ಕೇಳ್ದೆನಗೆ ವೀರಶ್ರೀಯುಂ ಕೀರ್ತಿಶ್ರೀಯುಮಲ್ಲದುೞಿದ ಪೆಂಡಿರ್ ಮೊೞಿಯಲ್ಲ ನೀವಿದನೇಕಾಗ್ರಹಂಗೆಯ್ವಿರೆಂದೊಡೆಂತುಮೆಮ್ಮೊಳ್ ಕಾದಲ್ವೇೞ್ಕುದೆಂದು–

**ಮ॥ ಕೆಳರ್ದಂದುಗ್ರ ರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ**
**ಕಳವೇೞ್ದಿರ್ವರುಮೈಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರ ಸಂ**
**ಕುಳದಿಂದೊರ್ವರನೊರ್ವರೆಚ್ಚು ನಿಜಪೀಠಾಂಭೋಜದಿಂ ಬ್ರಹ್ಮನು**
**ಚ್ಚಳಿಪನ್ನಂ ಪಿರಿದೊಂದು ಸಂಕಟಮನೀ ತ್ರೈಲೋಕ್ಯದೊಳ್ ಮಾಡಿದರ್. ॥79॥**

ಶಿಖರಿಣಿ॥ ಅತರ್ಕ್ಯಂ ವಿಕ್ರಾಂತಂ  ಭುಜಬಲಮಸಾಮಾನ್ಯಮಧಿಕಂ
ಪ್ರತಾಪಂ ಪೋಗೀತಂಗೆಣೆಯೆ ದಿವಿಜರ್ ವಾಯುಪಥದೊಳ್
ಶಿತಾಸ್ತ್ರಂಗಳ್ ಪೊಂಕಂಗಿಡಿಸೆ ಸುಗಿದಂ ಭಾರ್ಗವನಿದೇಂ
ಪ್ರತಿಜ್ಞಾಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ. ॥80॥

ವ॥ ಅಂತು ಗಾಂಗೇಯನೊಳ್ ಪರಶುರಾಮಂ ಕಾದಿ ಬಸವೞಿದುಸಿರಲಪ್ಪೊಡಮಾಱದೆ ಮೂರ್ಛೆವೋಗಿರ್ದನಂ ಕಂಡಂಬೆಯೆಂಬ ದಂಡುರುಂಬೆ ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆಂದು ಕೋಪಾಗ್ನಿಯಿಂದಮಗ್ನಿಶರೀರೆಯಾಗಿ ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ ಕಾರಣಾಂತರದೊಳ್ ಶಿಖಂಡಿಯಾಗಿರ್ದಳ್.

✦

# ೩. ಧೃತರಾಷ್ಟ್ರ ಪಾಂಡು ವಿದುರ ಜನನ

## ಪಾತ್ರಗಳು

**ಗಾಂಗೇಯ :** ಶಂತನು ಮತ್ತು ಗಂಗಾದೇವಿಯ ಮಗ. ಶಂತನು ಮಹಾರಾಜನ ಹಿರಿಯ ಮಗ. ಈತನು ಸತ್ಯವತಿಯ ತಂದೆಯಾದ ದಾಶರಾಜನಿಗೆ ನೀಡಿದ್ದ ವಾಗ್ದಾನವನ್ನು ಬಿಡದೆ ಪಾಲಿಸಿದ್ದರಿಂದ ಭೀಷ್ಮನೆಂಬ ಹಿರಿಮೆಯ ಹೆಸರು ಬಂದಿತ್ತು.

**ಸತ್ಯವತಿ :** ಶಂತನು ಮಹಾರಾಜನ ಹೆಂಡತಿ. ಈಕೆಗೆ ಯೋಜನಗಂಧಿ ಎಂಬ ಮತ್ತೊಂದು ಹೆಸರಿದೆ.

**ವಿಚಿತ್ರವೀರ್ಯ:** ಶಂತನು ಮತ್ತು ಸತ್ಯವತಿಯ ಮಗ.

**ಕೃಷ್ಣದ್ವೈಪಾಯನ :** ಪರಾಶರ ಮುನಿ ಮತ್ತು ಯೋಜನಗಂಧಿಯ ಮಗ. ಈತನಿಗೆ ವ್ಯಾಸ ಎಂಬ ಮತ್ತೊಂದು ಹೆಸರಿದೆ.

**ಅಂಬಿಕೆ :** ಹಸ್ತಿನಾವತಿಯ ರಾಜನಾಗಿದ್ದ ವಿಚಿತ್ರವೀರ್ಯನ ಮೊದಲನೆಯ ಹೆಂಡತಿ. ಕಾಶಿರಾಜನ ಎರಡನೆಯ ಮಗಳು.

**ಅಂಬಾಲಿಕೆ :** ಹಸ್ತಿನಾವತಿಯ ರಾಜನಾಗಿದ್ದ ವಿಚಿತ್ರವೀರ್ಯನ ಎರಡನೆಯ ಹೆಂಡತಿ. ಕಾಶಿರಾಜನ ಮೂರನೆಯ ಮಗಳು.

**ದಾಸಿ :** ರಾಣಿವಾಸದಲ್ಲಿ ಅಂಬಿಕೆಯ ದಾಸಿ.

# ಧೃತರಾಷ್ಟ್ರ ಪಾಂಡು ವಿದುರ ಜನನ

ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮ್ ಅವಾರ್ಯವೀರ್ಯನುಮ್ ಆಗಿ ಕೆಲವು ಕಾಲಮ್ ರಾಜ್ಯಲಕ್ಷ್ಮಿಯಮ್ ತಾಳ್ದಿ, ರಾಜಯಕ್ಷ್ಮತಪ್ತ ಶರೀರನ್ ಆತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನ್ ಆದೊಡೆ; ಗಾಂಗೇಯನುಮ್ ಸತ್ಯವತಿಯುಮ್ ಅತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ ಆತಂಗೆ ಪರಲೋಕಕ್ರಿಯೆಗಳಮ್ ಮಾಡಿ, ರಾಜ್ಯಮ್ ನಷ್ಟರಾಜಮ್ ಆದುದರ್ಕೆ ಮಮ್ಮಲಮ್ ಮಱುಗಿ ಯೋಜನಗಂಧಿ ಸಿಂಧುಪುತ್ರನನ್ ಇಂತು ಎಂದಳ್..

**ಸತ್ಯವತಿ:** ಮಗನೆಂಬಂತು ಧರಿತ್ರಿ ನಿನ್ನನುಜರನ್ ಕೈಕೊಂಡು, ಮುನ್ ಪೂಣ್ದ ನನ್ನಿಗೆ ಬನ್ನಮ್ ಬರಲ್ ಈಯದೆ, ಆರ್ತು ಎಸಗಿದ ಈ ವಿಖ್ಯಾತಿಯುಮ್ ಕೀರ್ತಿಯುಮ್ ಮುಗಿಲಮ್ ಮುಟ್ಟಿದುದು ಅಲ್ತೆ. ನಮ್ಮ ಕುಲದೊಳ್ ಮಕ್ಕಳ್ ಪೆಱರ್, ನೀನೇ ಜಟ್ಟಿಗನೈ. ಮುನ್ನಿನ ಒರಂಟು ಬೇಡ. ಮಗನೇ ಧರಾಭಾರಮಮ್ ಕೈಕೊಳ್ ಎಂದು ನಿನ್ನನ್ ಆನ್ ಇನಿತನ್ ಕೈಯೊಡ್ಡಿ ಬೇಡಿದೆನ್.

(ಎಂದ ಸತ್ಯವತಿಗೆ ಅಮರಾಪಗಾನಂದನನ್ ಇಂತು ಎಂದನ್.)

**ಗಾಂಗೇಯ:** ರಾಜ್ಯಮ್ ಕಿಡುಗುಮೆ. ರಾಜ್ಯದ ತೊಡರ್ಪು ಅದು ಏವಾಲ್ತಿ ಬಾಲ್ತಿ. ನನ್ನಿಯ ನುಡಿಯನ್ ಕಿಡೆ ನೆಗಳ್ಚಿ, ನಾನುಮ್ ಎರಡನ್ ನುಡಿದೊಡೆ, ಹರಿ ಹರ ಹಿರಣ್ಯಗರ್ಭರ್ ನಗರೇ. ಹಿಮಕರನ್ ಆತ್ಮಶೀತರುಚಿಯನ್; ದಿನನಾಯಕನ್ ಉಷ್ಣದೀಧಿತಿಕ್ರಮಮನ್; ಅಗಾಧ ವಾರಿಧಿಯೆ ಗುಣ್ಪನ್; ಇಳಾವಧು ತನ್ನ ತಿಣ್ಪನ್; ಉತ್ತಮ ಕುಲಶೈಲಮ್ ಉನ್ನತಿಯನ್ ಏಳಿದವಾಗೆ ಬಿಸುಟ್ಕೊಡಮ್ ಬಿಸುಟ್ಕೆಮ. ಅಂಬಿಕೇ, ಈಗಳ್ ಮದೀಯ ಪುರುಷವ್ರತಮ್ ಒಂದುಮನ್ ಬಿಸುಡೆನ್.

(ಎಂದು ತನ್ನ ನುಡಿದ ಪ್ರತಿಜ್ಞೆಯನ್ ಏಗೆಯ್ದು ತಪ್ಪಿದನ್ ಇಲ್ಲ. ರಂಗತ್ತರಂಗ ವಾರ್ಧಿ ಚಯಂಗಳ್ ತಂತಮ್ಮ ಮೇರೆಯಮ್

ದಾಂಟುವೊಡಮ್ ಗಾಂಗೇಯನುಮ್ ಪ್ರತಿಜ್ಞಾಗಾಂಗೇಯನುಮ್ ಒರ್ಮೆ ನುಡಿದುದನ್ ತಪ್ಪುವರೇ. ಅಂತು ಅಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನ್ ಏಗೆಯ್ದುಮ್ ಒಡಂಬಡಿಸಲಾಱದೆ, ಸತ್ಯವತಿ ತಾನುವ್ ಆತನುವ್ ಆಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನನ್ ನೆನೆದು ಬರಿಸಿದೊಡೆ..)

ವ್ಯಾಸ : ಏಗೆಯ್ವುದು.....ಏನಮ್ ತೀರ್ಚುವುದು...

ಸತ್ಯವತಿ: **ಹಿರಣ್ಯಗರ್ಭ ಬ್ರಹ್ಮರಿನ್ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಎಮ್ಮ ಸೋಮವಂಶಮ್, ಈಗಳ್ ಕುಲಸಂತತಿಗಮ್ ಆರುಮ್ ಇಲ್ಲದೆ ಎಡೆಪಱಿದು ಕಿಡುವಂತಾಗಿ ಇರ್ದುದು ಕಾರಣದಿನ್, ನಿಮ್ಮ ತಮ್ಮನ್ ವಿಚಿತ್ರವೀರ್ಯನ ಕ್ಷೇತ್ರದೊಳ್ ಅಂಬಿಕೆಗಮ್ ಅಂಬಾಲೆಗಮ್ ಪುತ್ರರ್ ಅಪ್ಪಂತು ವರಪ್ರಸಾದಮನ್ ದಯೆಗೆಯ್ವುದು.**

ವ್ಯಾಸ : **ಅಂತೆ ಗೆಯ್ವೆನ್.**

(ಎಂದು ತ್ರಿದಶ ನರ ಅಸುರ ಉರಗ ಗಣ ಪ್ರಭು ನಿಶ್ಚಿತ ತತ್ವಯೋಗಿ ಯೋಗದ ಬಲಮ್ ಉಣ್ಮೆ ಪೊಣ್ಮೆ ನಿಲೆ, ಪುತ್ರ ವರಾರ್ಥಿಗಳಾಗಿ ತನ್ನ ಕಟ್ಟಿದಿರೊಳೆ ನಿಂದರನ್ ನಯದೆ ನೋಡೆ, ಮುನೀಂದ್ರನ ದಿವ್ಯದೃಷ್ಟಿ ಮಂತ್ರದೊಳೆ ಆ ಸತಿಯರ್ ಇರ್ವರೊಳಮ್ ನವಗರ್ಭವಿಭ್ರಮಮ್ ಪೊದಳ್ದುದು. ಅಂತು ದಿವ್ಯಸಂಯೋಗದೊಳ್ ಇರ್ವರುಮ್ ಗರ್ಭಮನ್ ತಾಳ್ದರ್. "ಮತ್ತೊರ್ವ ಮಗನನ್ ವರಮನ್ ಬೇಡು" ಎಂದು ಅಂಬಿಕೆಗೆ ಪೇೞ್ದೊಡೆ, ಆಕೆಯುಮ್ ವ್ಯಾಸಭಟ್ಟಾರಕನಲ್ಲಿಗೆ ಪೋಗಲ್ ಅಲಸಿ, ತನ್ನ ಸೂಳಾಯ್ತೆಯನ್ ತನ್ನವೊಲೆ ಕಯ್ಗೆಯ್ದು ಬರವನ್ ಬೇಡಲ್ ಅಟ್ಟಿದೊಡೆ ಆಕೆಗೆ ವರದನಾಗಿ, ವ್ಯಾಸಮುನೀಂದ್ರನ್ ಸತ್ಯವತಿಗಮ್ ಭೀಷ್ಮಂಗಮ್ ಇಂತು ಎಂದನ್.)

ವ್ಯಾಸ: **ಎನ್ನ ವರಪ್ರಸಾದ ಕಾಲದೊಳ್ ಎನ್ನಮ್ ಕಂಡು ಅಂಬಿಕೆ ಕಣ್ಣಮ್ ಮುಚ್ಚಿದಳ್ ಅಪ್ಪುದಱಿಂದ ಆಕೆಗೆ ಧೃತರಾಷ್ಟ್ರನ್ ಎಂಬ ಮಗನ್ ಅತ್ಯಂತ ಸುಂದರಾಂಗನಾಗಿಯುಮ್ ಜಾತ್ಯಂಧನಕ್ಕುಮ್; ಅಂಬಾಲೆ ಮದ್ರೂಪಮಮ್ ಕಂಡು ಮೊಗಮನ್ ಪಾಂಡುರಮ್ ಮಾಡಿದಳ್ ಅಪ್ಪುದಱಿಂದ ಆಕೆಗೆ ಪಾಂಡುರೋಗಸಂಗತನುಮ್ ಅನೇಕ ಭದ್ರಲಕ್ಷಣಲಕ್ಷಿತನುಮ್ ಅತ್ಯಂತ ಪ್ರತಾಮನುಮಾಗಿ ಪಾಂಡುರಾಜನೆಂಬ**

**ಮಗನಕ್ಕುವಮ್; ಅಂಬಿಕೆಯ ಸೂಟಿಶಾಯ್ತೆಯಪ್ಪಾಕೆ ದರಹಸಿತ ವದನಾರವಿಂದೆಯಾಗಿ ಬರವನ್ ಕೈಕೊಂಡಳ್ ಅಪ್ಪುದಱಿಂದ ಆಕೆಯ ಮಗನ್ ವಿದುರನೆಂಬನ್ ಅನಂಗಾಕಾರನುಮ್ ಆಚಾರವಂತನುಮ್ ಬುದ್ಧಿವಂತನುಮ್ ಅಕ್ಕುಮ್.**

(ಎಂದು ಪೇಳ್ದು ಮುನಿಪುಂಗವನ್ ಪೋದನ್. ಇತ್ತ ವರಮ್ ಪಡೆದ ಸಂತಸಮ್ ಮನದೊಳಾಗಲ್ ಒಂದು ಉತ್ತರೋತ್ತರಮ್ ಬಳೆವ ಮಾಟ್ಕೆಯಿಮ್ ಬಳೆವ ಗರ್ಭಮಮ್ ತಾಳ್ದಿ, ಅಂದು ಆದರಮ್ ಬೆರಸು ಮೂವರು ಕ್ರಮದೆ ವಿಖ್ಯಾತ ಧೃತರಾಷ್ಟ್ರ, ಪಾಂಡುರಾಜ ವಿದುರರ್ಕಳಮ್ ಮೂವರನ್ ಪೆತ್ತರ್.)

✦

## ಧೃತರಾಷ್ಟ್ರ ಪಾಂಡು ವಿದುರ ಜನನ
## ಪದ ವಿಂಗಡಣೆ ಮತ್ತು ತಿರುಳು

ಬೆಂಬಲ+ಒಳ್; ಬೆಂಬಲ=ನೆರವು; ವಿಚಿತ್ರವೀರ್ಯನ್+ಉಮ್; ಅವಾರ್ಯ +ವೀರ್ಯನ್+ಉವ್; ಉವ್=ಊ; ಅವಾರ್ಯ=ಅಡೆತಡೆಯಿಲ್ಲದೆ ಮುಂದುವರಿಯುವುದು; ವೀರ್ಯ=ಕಲಿತನ/ಬಲ/ಕೆಚ್ಚು; ಅವಾರ್ಯವೀರ್ಯನ್=ಮಹಾ ಶೂರ;

**ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮ್ ಅವಾರ್ಯವೀರ್ಯನುಮ್ ಆಗಿ**=ಗಾಂಗೇಯರ ನೆರವಿನಿಂದ ವಿಚಿತ್ರವೀರ್ಯನು ಯಾವುದೇ ಅಡೆತಡೆಗಳಿಲ್ಲದೆ ಕಲಿತನದಿಂದ ರಾಜ್ಯವನ್ನು ಆಳುತ್ತಿರಲಾಗಿ;

ತಾಳ್=ಹೊಂದು/ಪಡೆ; ಲಕ್ಷ್ಮಿ=ವ್ಯಕ್ತಿಯ ಬಳಿಯಿರುವ ಭೂಮಿ, ಬೆಲೆಬಾಳುವ ಒಡವೆ ವಸ್ತು ಹಣ, ರಾಜ್ಯದ ಒಡೆತನದ ಗದ್ದುಗೆ ಮುಂತಾದ ಸಂಪತ್ತಿಗೆ ಜನಸಮುದಾಯ ಲಕ್ಷ್ಮಿ ಎಂಬ ಹೆಣ್ಣು ದೇವತೆಯನ್ನು ಕಲ್ಪಿಸಿಕೊಂಡಿದೆ;

ರಾಜ್ಯಲಕ್ಷ್ಮಿ=ರಾಜ್ಯದ ಒಡೆತನ;

**ಕೆಲವು ಕಾಲಮ್ ರಾಜ್ಯಲಕ್ಷ್ಮಿಯಮ್ ತಾಳ್ದಿ**=ಕೆಲವು ವರ್ಷಗಳ ಕಾಲ ರಾಜ್ಯದ ಆಡಳಿತದ ಜವಾಬ್ದಾರಿಯನ್ನು ಹೊತ್ತು ರಾಜ್ಯವನ್ನು ಮುನ್ನಡೆಸುತ್ತಿರುವಾಗ ;

ರಾಜ=ದೊಡ್ಡ; ಯಕ್ಷ್ಮ=ಒಂದು ರೋಗದ ಹೆಸರು. ಶ್ವಾಸಕೋಶಕ್ಕೆ ತಗುಲಿದ ನಂಜಿನಿಂದ ಬರುವ ಕ್ಷಯ ರೋಗ; ರಾಜಯಕ್ಷ್ಮ=ದೊಡ್ಡ ಪ್ರಮಾಣದಲ್ಲಿ ತಗುಲಿದ ಕ್ಷಯರೋಗ; ತಪ್ತ=ಸಂಕಟವನ್ನು ಹೊಂದುವುದು; ಆತ್ಮಜ=ಮಗ; ವಿಗತ=ಅಗಲಿದ; ಆತ್ಮವಿಗತಜೀವಿಯಾಗಿ=ಮಕ್ಕಳನ್ನು ಪಡೆಯುವುದಕ್ಕೆ ಮುನ್ನವೇ ಸಾವನ್ನಪ್ಪಿದವನಾಗಿ; ಪರಲೋಕ=ಮತ್ತೊಂದು ಲೋಕ; ವ್ಯಕ್ತಿಯು ಸತ್ತ ನಂತರ ಮತ್ತೊಂದು ಲೋಕಕ್ಕೆ ಹೋಗುತ್ತಾನೆ ಎಂಬ ನಂಬಿಕೆಯು ಜನಮನದಲ್ಲಿದೆ; ಪ್ರಾಪ್ತ=ಹೊಂದುವುದು/ ಪಡೆಯುವುದು; ಆದೊಡೆ=ಆದರೆ;

ಪರಲೋಕ ಪ್ರಾಪ್ತನ್ ಆದೊಡೆ=ಸಾವನ್ನಪ್ಪಲು;

**ರಾಜಯಕ್ಷ್ಮ ತಪ್ತ ಶರೀರನ್ ಆತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನ್ ಆದೊಡೆ**=ಶರೀರದಲ್ಲಿ ದೊಡ್ಡದಾಗಿ ಹರಡಿದ ಕ್ಷಯರೋಗದಿಂದ ನೊಂದು ಬೆಂದು ಮಕ್ಕಳನ್ನು ಪಡೆಯುವುದಕ್ಕೆ ಮೊದಲೇ ವಿಚಿತ್ರವೀರ್ಯನು ಸಾವನ್ನಪ್ಪಲು;

ಗಾಂಗೇಯನ್+ಉಮ್; ಸತ್ಯವತಿ+ಉಮ್; ಅತ್ಯಂತ=ಅತಿ ಹೆಚ್ಚಿನ; ಶೋಕ+ಅನಲ; ಶೋಕ=ಸಂಕಟ/ವೇದನೆ/ಅಳಲು; ಅನಲ=ಬೆಂಕಿ; ದಹ್ಯಮಾನ= ಸುಡುತ್ತಿರುವ; ಮಾನಸ+ಅರ್+ಕಳ್+ಆಗಿ; ಕಳ್=ಗಳು; ಮಾನಸ=ಮನಸ್ಸು; ಮಾನಸರ್=ಮನಸ್ಸಿನವರು;

**ಗಾಂಗೇಯನುಮ್ ಸತ್ಯವತಿಯುಮ್ ಅತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ**=ಗಾಂಗೇಯನೂ ಸತ್ಯವತಿಯೂ ಅತಿ ಹೆಚ್ಚಿನ ಸಂಕಟದ ಬೆಂಕಿಯಲ್ಲಿ ಬೇಯುತ್ತ ಮಾನಸಿಕವಾಗಿ ತುಂಬಾ ನೊಂದುಕೊಂಡು;

ಆತಂಗೆ=ವಿಚಿತ್ರವೀರ್ಯನಿಗೆ; ಪರಲೋಕ+ಕ್ರಿಯೆ+ಗಳ್+ಅಮ್; ಕ್ರಿಯೆ=ಆಚರಣೆ; ಅಮ್=ಅನ್ನು; ಪರಲೋಕ ಕ್ರಿಯೆ=ವ್ಯಕ್ತಿಯು ಸತ್ತ ನಂತರ ಅವನ ಜೀವಕ್ಕೆ ಪರಲೋಕದಲ್ಲಿ ಸದ್ಗತಿಯು ದೊರೆಯಲೆಂದು ಮಾಡುವ ಆಚರಣೆಗಳು;

**ಆತಂಗೆ ಪರಲೋಕಕ್ರಿಯೆಗಳಮ್ ಮಾಡಿ**=ಸಾವಿನ ನಂತರ ಮಾಡಬೇಕಾದ ಆಚರಣೆಗಳನ್ನು ವಿಚಿತ್ರವೀರ್ಯನಿಗೆ ಮಾಡಿ;

ನಷ್ಟ=ಇಲ್ಲವಾಗುವುದು; ಆದುದರ್ಕೆ=ಆಗಿದ್ದಕ್ಕೆ; ಮಮ್ಮಲ=ಬಹಳವಾಗಿ/ಅತಿಯಾಗಿ; ಮಱುಗು=ಸಂಕಟಪಡು/ಚಿಂತಿಸು;

**ರಾಜ್ಯಮ್ ನಷ್ಟರಾಜಮ್ ಆದುದರ್ಕೆ ಮಮ್ಮಲಮ್ ಮಱುಗಿ**=ರಾಜ್ಯಕ್ಕೆ ರಾಜನಿಲ್ಲದಂತಾದುದಕ್ಕಾಗಿ ಬಹಳವಾಗಿ ಚಿಂತಿಸುತ್ತ ;

ಯೋಜನಗಂಧಿ=ಸತ್ಯವತಿಗೆ ಇದ್ದ ಮತ್ತೊಂದು ಹೆಸರು; ಸಿಂಧು=ನದಿ; ಸಿಂಧುಪುತ್ರ=ಗಂಗಾದೇವಿಯ ಮಗ ಗಾಂಗೇಯ; ಇಂತು=ಈ ರೀತಿ; ಎಂದಳ್= ಹೇಳಿದಳು;

**ಯೋಜನಗಂಧಿ ಸಿಂಧುಪುತ್ರನನ್ ಇಂತು ಎಂದಳ್**=ಸತ್ಯವತಿಯು ಗಾಂಗೇಯನನ್ನು ಕುರಿತು ಈ ರೀತಿ ಹೇಳಿದಳು;

ಮಗನ್+ಎಂಬ+ಅಂತು; ಎಂಬ=ಎನ್ನುವ; ಅಂತು=ರೀತಿಯಲ್ಲಿ; ಧರಿತ್ರಿ= ಭೂಮಂಡಲ/ಲೋಕ; ನಿನ್ನ+ಅನುಜರನ್; ಅನುಜ=ತಮ್ಮ; ಕೈಕೊಂಡು=ಸ್ವೀಕರಿಸಿ;

**ಮಗನ್ ಎಂಬಂತು ಧರಿತ್ರಿ ನಿನ್ನನುಜರನ್ ಕೈಕೊಂಡು**= "ಮಗನೆಂದರೆ ನೀನೆ

ಮಗ" ಎಂದು ಲೋಕವೆಲ್ಲ ಹೊಗಳುವ ರೀತಿಯಲ್ಲಿ ನಿನ್ನ ತಮ್ಮಂದಿರ ಜವಾಬ್ದಾರಿಯನ್ನು ವಹಿಸಿಕೊಂಡು ;

ಮುನ್=ಈ ಮೊದಲು; ಪೂಣ್=ಮಾತು ಕೊಡು/ವಾಗ್ದಾನ ನೀಡು; ನನ್ನಿ=ವಚನ/ನುಡಿ; ಬನ್ನ=ಚ್ಯುತಿ/ಹಾನಿ; ಈ=ನೀಡು/ಕೊಡು; ಈಯದೆ=ಅವಕಾಶವನ್ನು ಕೊಡದೆ;

**ಮುನ್ ಪೂಣ್ದ ನನ್ನಿಗೆ ಬನ್ನಮ್ ಬರಲ್ ಈಯದೆ=** ಈ ಮೊದಲು ನನ್ನ ತಂದೆಯಾದ ದಾಶರಾಜನಿಗೆ ನೀನು ನೀಡಿದ್ದ "ನನಗೂ ರಾಜ್ಯದ ಪಟ್ಟಕ್ಕೂ ಯಾವ ನಂಟು ಇಲ್ಲ" ಎಂಬ ಮಾತಿಗೆ ತಪ್ಪಿ ನಡೆಯದೆ ;

ಆರ್ತು=ಶಕ್ತನಾಗಿ; ಎಸಗು=ಮಾಡು; ವಿಖ್ಯಾತಿ+ಉಮ್; ಕೀರ್ತಿ+ಉಮ್; ಮುಗಿಲ+ಅಮ್; ಮುಗಿಲು=ಆಕಾಶ/ಬಾನು; ಅಲ್ತೆ=ಅಲ್ಲವೇ;

**ಆರ್ತು ಎಸಗಿದ ಈ ವಿಖ್ಯಾತಿಯುಮ್ ಕೀರ್ತಿಯುಮ್ ಮುಗಿಲಮ್ ಮುಟ್ಟಿದುದು ಅಲ್ತೆ=**ಕೊಟ್ಟ ಮಾತಿಗೆ ತಪ್ಪಿ ನಡೆಯದೆ ನೀನು ಮಾಡಿದ ಕಾರ್ಯಗಳಿಂದ ನಿನ್ನ ವ್ಯಕ್ತಿತ್ವಕ್ಕೆ ದೊರಕಿದ ಕೀರ್ತಿ ಮತ್ತು ಮನ್ನಣೆಯು ಮುಗಿಲನ್ನು ಮುಟ್ಟಿದೆಯಲ್ಲವೇ ;

ಕುಲ+ಒಳ್; ಕುಲ=ಮನೆತನ/ವಂಶ; ಪೆಱರ್=ಇತರರು; ಜಟ್ಟಿಗ=ಶೂರ/ವೀರ;

**ನಮ್ಮ ಕುಲದೊಳ್ ಮಕ್ಕಳ್ ಪೆಱರ್ ನೀನೇ ಜಟ್ಟಿಗನೈ=**ನಮ್ಮ ವಂಶದಲ್ಲಿ ನಿನ್ನಂತಹ ಮಕ್ಕಳು ಬೇರೆ ಯಾರಿದ್ದಾರೆ. ನೀನೇ ವೀರ;

ಮುನ್ನಿನ=ಈ ಮೊದಲಿನ; ಒರಂಟು=ಒರಟುತನ/ಹಟಮಾರಿತನ/ಒಂದೇ ನಿಲುವಿಗೆ ಅಂಟಿಕೊಂಡಿರುವುದು;

**ಮುನ್ನಿನ ಒರಂಟು ಬೇಡ=**ಈ ಮೊದಲು ನೀನು "ರಾಜ್ಯದ ಪಟ್ಟವನ್ನು ಎಂದಿಗೂ ಸ್ವೀಕರಿಸುವುದಿಲ್ಲ" ಎಂದು ನನ್ನ ತಂದೆಗೆ ನೀಡಿದ್ದ ವಾಗ್ದಾನಕ್ಕೆ ಅಂಟಿಕೊಂಡು ಹಟಮಾರಿಯಾಗಬೇಡ;

ಧರಾ=ಭೂಮಿ; ಭಾರ=ತೂಕ/ಹೊರೆ; ಧರಾಭಾರ=ರಾಜ್ಯವನ್ನು ಆಳುವ ಹೊಣೆಗಾರಿಕೆಯನ್ನು; ಕೈಕೊಳ್=ಸ್ವೀಕರಿಸು;

**ಮಗನೇ ಧರಾಭಾರಮಮ್ ಕೈಕೊಳ್=**ಮಗನೇ, ರಾಜನಾಗಿ ಆಡಳಿತವನ್ನು ನಡೆಸು;

ಆನ್=ನಾನು; ಇನಿತನ್=ಇದೊಂದನ್ನು; ಬೇಡು=ಕೇಳು/ಯಾಚಿಸು;

**ಎಂದು ನಿನ್ನನ್ ಆನ್ ಇನಿತನ್ ಕೈಯೊಡ್ಡಿ ಬೇಡಿದೆನ್=**ನನ್ನ ಈ ಒಂದು ಆಸೆಯನ್ನು ಈಡೇರಿಸಬೇಕೆಂದು ಕಯ್ ಒಡ್ಡಿ ನಿನ್ನನ್ನು ಬೇಡಿಕೊಳ್ಳುತ್ತೇನೆ;

ಎಂದ=ಎಂದು ಹೇಳಿದ; ಅಮರ+ಆಪಗಾ+ನಂದನನ್; ಅಮರ=ದೇವತೆ; ಆಪಗಾ=ನದಿ; ನಂದನ=ಮಗ; ಅಮರಾಪಗಾನಂದನ=ಗಂಗಾ ದೇವಿಯ ಮಗನಾದ ಗಾಂಗೇಯ; ಇಂತು=ಈ ರೀತಿ;

**ಎಂದ ಸತ್ಯವತಿಗೆ ಅಮರಾಪಗಾ ನಂದನನ್ ಇಂತು ಎಂದನ್**=ಎಂದು ಬೇಡಿಕೊಂಡ ಸತ್ಯವತಿಗೆ ಗಾಂಗೇಯನು ಈ ರೀತಿ ಹೇಳಿದನು;

ಕಿಡು=ನಾಶವಾಗು/ಅಳಿ;

**ರಾಜ್ಯಮ್ ಕಿಡುಗುಮೆ**=ರಾಜ್ಯವು ಎಂದಿದ್ದರೂ ಹಾಳಾಗುವಂತಹುದಲ್ಲವೇ;

ತೊಡರ್ಪು=ತೊಡಕು/ಬಂಧನ/ಕಟ್ಟು; ಏನ್+ಬಾಳ್ತೆ; ಏನ್=ಯಾವುದು; ಬಾಳ್ತೆ=ಬದುಕು/ಜೀವನ/ಪ್ರಯೋಜನ; ಏವಾಳ್ತೆ=ಅಂತಹ ಜೀವನದಿಂದ ದೊರೆಯುವ ಪ್ರಯೋಜನವಾದರೂ ಏನು;

**ರಾಜ್ಯದ ತೊಡರ್ಪು ಅದು ಏವಾಳ್ತೆ ಬಾಳ್ತೆ** =ಅಳಿಯುವಂತಹ ರಾಜ್ಯದ ಪಟ್ಟದ ತೊಡಕಿನಿಂದ ಜೀವನದಲ್ಲಿ ನನಗೆ ದೊರೆಯುವ ಪ್ರಯೋಜನವೇನು ;

ನನ್ನಿ=ಆಣೆ/ವಾಗ್ದಾನ; ಕಿಡೆ=ಹಾಳಾಗುವಂತೆ; ನೆಗಲ್=ಮಾಡು/ಆಚರಿಸು; ನಾನ್+ಉಮ್; ನಾನುಮ್=ನಾನೂ; ಎರಡನ್ ನುಡಿದೊಡೆ=ಎರಡು ಬಗೆಯಲ್ಲಿ ಮಾತನಾಡಿದರೆ;

**ನನ್ನಿಯ ನುಡಿಯನ್ ಕಿಡೆ ನೆಗಲ್ ನಾನುಮ್ ಎರಡನ್ ನುಡಿದೊಡೆ**=ನಾನು ನಿಮ್ಮ ತಂದೆಗೆ ನೀಡಿದ ವಾಗ್ದಾನದ ನುಡಿಗಳು ಹಾಳಾಗುವಂತೆ ನಾನೂ ಕೂಡ ಇಬ್ಬಗೆಯ ಮಾತುಗಳನ್ನಾಡಿದರೆ ಅಂದರೆ ಮೊದಲೊಂದು ರೀತಿಯಲ್ಲಿ ನುಡಿದು ಈಗ ಆ ಮಾತಿಗೆ ತಪ್ಪಿ ನಡೆಯುವಂತೆ ಮಾತನಾಡಿದರೆ;

ಹರಿ=ವಿಷ್ಣು; ಹರ=ಶಿವ; ಹಿರಣ್ಯಗರ್ಭ=ಬ್ರಹ್ಮ; ಹಿರಣ್ಯ=ಚಿನ್ನ; ಗರ್ಭ=ಬಸಿರು/ಹೊಟ್ಟೆ; ಮೊಟ್ಟೆಯ ಆಕಾರದಲ್ಲಿದ್ದ ಚಿನ್ನದ ಬಸಿರಿನಿಂದ ಬ್ರಹ್ಮದೇವನು ಹೊರಬಂದು ಜಗತ್ತಿನಲ್ಲಿ ಜೀವರಾಶಿಗಳನ್ನು ಹುಟ್ಟಿಸಿದನೆಂಬ ಕಲ್ಪನೆಯು ಇಂಡಿಯಾ ದೇಶದ ಪುರಾಣದ ಹೊತ್ತಿಗೆಗಳಲ್ಲಿ ಕಂಡುಬರುತ್ತದೆ;

**ಹರಿ ಹರ ಹಿರಣ್ಯಗರ್ಭರ್ ನಗರೇ**=ವಿಷ್ಣು ಶಿವ ಬ್ರಹ್ಮರು ನನ್ನ ಇಬ್ಬಗೆಯ ನಡೆನುಡಿಯನ್ನು ಕಂಡು ನಗುವುದಿಲ್ಲವೇ;

ಹಿಮಕರ=ಚಂದ್ರ; ಆತ್ಮ+ಶೀತ+ರುಚಿ+ಅನ್; ಆತ್ಮ=ತನ್ನ; ಶೀತ=ತಂಪಾಗಿರುವ; ರುಚಿ=ಕಿರಣ; ಅನ್=ಅನ್ನು;

**ಹಿಮಕರನ್ ಆತ್ಮಶೀತ ರುಚಿಯನ್** =ಚಂದ್ರನು ತನ್ನ ತಂಪಾದ ಕಿರಣಗಳನ್ನು;

ದಿನ+ನಾಯಕ+ಅನ್; ದಿನ=ಹಗಲು; ನಾಯಕ=ಒಡೆಯ; ದಿನನಾಯಕ= ಸೂರ್ಯ; ಉಷ್ಣ+ದೀಧಿತಿ+ಕ್ರಮಮ್+ಅನ್; ಉಷ್ಣ=ಬಿಸಿ; ದೀಧಿತಿ=ಕಿರಣ; ಕ್ರಮ=ರೀತಿ;

**ದಿನನಾಯಕನ್ ಉಷ್ಣದೀಧಿತಿ ಕ್ರಮಮನ್**=ಸೂರ್ಯನು ಬಿಸಿಯಾದ ಕಿರಣಗಳನ್ನು ಬೀರುವ ರೀತಿಯನ್ನು;

ಅಗಾಧ=ವಿಸ್ತಾರವಾಗಿಯೂ ಆಳವಾಗಿಯೂ ಇರುವ; ವಾರಿಧಿ=ಕಡಲು; ಗುಣ್ಪು=ವಿಸ್ತಾರವಾಗಿಯೂ ಆಳವಾಗಿಯೂ ಇರುವುದು;

**ಅಗಾಧ ವಾರಿಧಿಯೆ ಗುಣ್ಪನ್** =ಕಡಲು ತನ್ನ ವಿಸ್ತಾರವನ್ನು ಮತ್ತು ಆಳವನ್ನು;

ಇಳಾ=ಭೂಮಿ; ವಧು=ಹೆಣ್ಣು; ಇಳಾವಧು=ಭೂದೇವಿ; ತಿಣ್ಪು=ಹೊರೆ/ತೂಕ;

**ಇಳಾವಧು ತನ್ನ ತಿಣ್ಪನ್**=ಭೂಮಿಯು ತನ್ನ ತೂಕವನ್ನು;

ಉತ್ತಮ=ದೊಡ್ಡದಾಗಿರುವ; ಕುಲ=ಗುಂಪು; ಶೈಲ=ಬೆಟ್ಟ ಉನ್ನತಿ+ಅನ್; ಉನ್ನತಿ=ಎತ್ತರ;

**ಉತ್ತಮ ಕುಲಶೈಲಮ್ ಉನ್ನತಿಯನ್** =ಮುಗಿಲೆತ್ತರಕ್ಕೆ ತಮ್ಮ ಕೋಡನ್ನು ಚಾಚಿ ಹಬ್ಬಿರುವ ಬೆಟ್ಟಗಳು ತಮ್ಮ ಎತ್ತರವನ್ನು ;

ಏಳಿದ+ಆಗೆ; ಏಳಿದ=ಅಪಹಾಸ್ಯಕ್ಕೆ ಗುರಿಯಾಗುವುದು; ಬಿಸುಟ್=ತೊರೆ/ಬಿಡು;

**ಏಳಿದವಾಗೆ ಬಿಸುಟಲ್ಕೊಡಮ್ ಬಿಸುಟ್ಕೆಮ**=ನಗೆಪಾಟಲಿಗೆ ಗುರಿಯಾಗುವಂತೆ ಬಿಟ್ಟರು ಬಿಡಲಿ ;

ಅಂಬಿಕೆ=ತಾಯಿ/ಅಮ್ಮ; ಮದೀಯ=ನನ್ನ; ಪುರುಷವ್ರತ=ಹೆಣ್ಣಿನೊಡನೆ ಕಾಮದ ನಂಟನ್ನು ಹೊಂದಬಾರದೆಂಬ ಸಂಕಲ್ಪ; ಒಂದುಮನ್=ಒಂದನ್ನು; ಬಿಸುಡೆನ್= ಬಿಡುವುದಿಲ್ಲ;

**ಅಂಬಿಕೇ, ಈಗಳ್ ಮದೀಯ ಪುರುಷವ್ರತಮ್ ಒಂದುಮನ್ ಬಿಸುಡೆನ್** =ಅಮ್ಮ, ಇದುವರೆಗೂ ನಾನು ಪಾಲಿಸಿಕೊಂಡು ಬಂದಿರುವ ಪುರುಷವ್ರತವನ್ನು ಮಾತ್ರ ಈಗ ಬಿಡುವುದಿಲ್ಲ;

ಉರಿಯುವ ಸೂರ್ಯ, ಬೆಳಗುವ ಚಂದ್ರ, ಜಲರಾಶಿಯಿಂದ ತುಂಬಿರುವ ಕಡಲು, ಮುಗಿಲಿನ ಎತ್ತರಕ್ಕೆ ಕೋಡನ್ನು ಚಾಚಿರುವ ಬೆಟ್ಟಗಳು ನಿಸರ್ಗದ ಸಹಜವಾದ ತಮ್ಮ ಗುಣವನ್ನು ಕಾಲಾನುಕ್ರಮದಲ್ಲಿ ಬಿಟ್ಟರೂ ಬಿಡಬಹುದು. ಆದರೆ ನಾನು ಮಾತ್ರ ಒಮ್ಮೆ ಕೊಟ್ಟಿರುವ ವಾಗ್ದಾನಕ್ಕೆ ಎಂದೆಂದಿಗೂ ತಪ್ಪದೆ ಬಾಳುತ್ತೇನೆ. ಗಾಂಗೇಯನು ತನ್ನ ನಿಲುವು ಅಚಲವಾದುದು ಎಂಬುದನ್ನು ಸೂಚಿಸಲು ಈ ಬಗೆಯ ಅತಿಶಯವಾದ

ನುಡಿಗಳನ್ನು ಆಡಿದ್ದಾನೆ;

ಪ್ರತಿಜ್ಞೆ=ಕಯ್ಗೊಂಡ ನಿಲುವು/ನೀಡಿದ ವಾಗ್ದಾನ; ಏನ್+ಗೆಯ್ದು; ಗೆಯ್ದು=ಮಾಡಿದರೂ; ತಪ್ಪು=ಬಿಡು;

**ಎಂದು ತನ್ನ ನುಡಿದ ಪ್ರತಿಜ್ಞೆಯನ್ ಏಗೆಯ್ದು ತಪ್ಪಿದನ್ ಇಲ್ಲ**=ಸತ್ಯವತಿಯು ಕೇಳಿಕೊಂಡರೂ ಗಾಂಗೇಯನು ಈ ಮೊದಲು ತಾನು ಆಡಿದ್ದ ಮಾತಿಗೆ ತಪ್ಪಿ ನಡೆಯಲಿಲ್ಲ;

ತರಂಗ=ನೀರಿನ ಅಲೆ; ರಂಗತ್ತರಂಗ=ಏರಿಳಿತಗಳಿಂದ ಕೂಡಿ ಕುಣಿಯುತ್ತಿರುವಂತೆ ಕಂಡುಬರುತ್ತಿರುವ ನೀರಿನ ಅಲೆಗಳು; ವಾರ್ಧಿ=ಕಡಲು; ಚಯಂ+ಗಳ್; ಚಯ=ಸಮೂಹ/ಗುಂಪು; ಮೇರೆ+ಅಮ್; ಮೇರೆ=ಎಲ್ಲೆ/ಗಡಿ; ದಾಂಟು=ಮೀರು/ಅತಿಕ್ರಮಿಸು; ದಾಂಟುವೊಡಮ್=ದಾಟಿದರೂ;

**ರಂಗತ್ತರಂಗ ವಾರ್ಧಿ ಚಯಂಗಳ್ ತಂತಮ್ಮ ಮೇರೆಯಮ್ ದಾಂಟುವೊಡಮ್** =ನೀರಿನ ಅಲೆಗಳ ಅಬ್ಬರದಿಂದ ಕೂಡಿರುವ ಕಡಲುಗಳು ಉಕ್ಕೆದ್ದು ತಮ್ಮ ಎಲ್ಲೆಯನ್ನು ಮೀರಿ ಮುಂದಕ್ಕೆ ನುಗ್ಗಿದರೂ ;

ಗಾಂಗೇಯನ್+ಉಮ್; ಪ್ರತಿಜ್ಞಾ+ಗಾಂಗೇಯನ್+ಉಮ್; ಒರ್ಮೆ=ಒಂದು ಬಾರಿ;

**ಗಾಂಗೇಯನುಮ್ ಪ್ರತಿಜ್ಞಾಗಾಂಗೇಯನುಮ್ ಒರ್ಮೆ ನುಡಿದುದನ್ ತಪ್ಪುವರೇ** =ಪ್ರತಿಜ್ಞಾಗಾಂಗೇಯನೆಂದು ಹೆಸರು ಪಡೆದಿರುವ ನಾನು ಒಮ್ಮೆ ಕೊಟ್ಟಿರುವ ಮಾತಿಗೆ ತಪ್ಪಿ ನಡೆಯುವುದು ಸರಿಯೇ;

ಅಂತು=ಆ ರೀತಿ; ಅಚಲಿತ=ಚಂಚಲಗೊಳ್ಳದ; ರೂಢ=ಚಲಾವಣೆಯಲ್ಲಿರುವ; ಪ್ರತಿಜ್ಞಾರೂಢನ್+ಆದ; ಪ್ರತಿಜ್ಞಾರೂಢನ್=ತಾನು ನೀಡಿದ ವಾಗ್ದಾನದಂತೆಯೇ ನಡೆದುಕೊಳ್ಳುತ್ತಿರುವವನು;

**ಅಂತು ಅಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನ್**=ನಿಶ್ಚಿತವಾದ ನಿಲುವಿನ ನಡೆನುಡಿಯುಳ್ಳ ಗಾಂಗೇಯನನ್ನು ;

ಏನ್+ಗೆಯ್ದುಮ್; ಗೆಯ್=ಮಾಡು/ನೆರವೇರಿಸು; ಒಡಂಬಡಿಸಲ್+ಆಱದೆ;

**ಏಗೆಯ್ದುಮ್ ಒಡಂಬಡಿಸಲಾಱದೆ**=ಏನು ಮಾಡಿದರೂ ಒಪ್ಪಿಸಲಾಗದೆ;

ತಾನ್+ಉಮ್; ಆತನ್+ಉಮ್;

**ಸತ್ಯವತಿ ತಾನುಮ್ ಆತನುಮ್ ಆಳೋಚಿಸಿ** =ಸತ್ಯವತಿಯೂ ಗಾಂಗೇಯನೂ ಪರಸ್ಪರ ಆಲೋಚನೆ ಮಾಡಿ;

ನಿಶ್ಚಿತ+ಮಂತ್ರರ್+ಆಗಿ; ನಿಶ್ಚಿತ=ಚಿಂತೆಯಿಂದ ದೂರವಾದುದು; ಮಂತ್ರ=ವಿಚಾರ; ನಿಶ್ಚಿತಮಂತ್ರ=ಈ ಚಿಂತೆಯಿಂದ ಪಾರಾಗುವ ಬಗೆ/ಈಗ ಬಂದಿರುವ ತೊಂದರೆಗೆ ಪರಿಹಾರ; ಕೃಷ್ಣದ್ವೈಪಾಯನ+ಅನ್; ಕೃಷ್ಣದ್ವೈಪಾಯನ=ಸತ್ಯವತಿ ಮತ್ತು ಪರಾಶರ ಮುನಿಯ ಮಗನಾದ ವ್ಯಾಸ ರಿಸಿ;

**ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನ್ ನೆನೆದು ಬರಿಸಿದೊಡೆ**=ತಮ್ಮ ಚಿಂತೆಗೆ ಪರಿಹಾರವನ್ನು ಕಂಡುಹಿಡಿಯಲು ವ್ಯಾಸನನ್ನು ನೆನೆದು ಬರಮಾಡಿಕೊಂಡಾಗ;

ಏನ್+ಗೆಯ್ವುದು; ಏನು=ಯಾವುದು; ಏನಮ್=ಯಾವುದನ್ನು; ತೀರ್= ನೆರವೇರಿಸು/ಈಡೇರಿಸು;

**ಏಗೆಯ್ವುದು ಏನಮ್ ತೀರ್ಚುವುದು**=ಈಗ ನನ್ನಿಂದ ಯಾವ ಕೆಲಸವಾಗಬೇಕು... ನಿಮ್ಮ ಯಾವ ಕೋರಿಕೆಯನ್ನು ಈಡೇರಿಸಬೇಕು;

ಹಿರಣ್ಯ=ಚಿನ್ನ; ಗರ್ಭ=ಹೊಟ್ಟೆ/ಬಸಿರು/ಒಳಗಡೆ; ಬ್ರಹ್ಮರ್+ಇನ್; ಇನ್=ಇಂದ; ತಗುಳ್=ಮೊದಲುಗೊಂಡು; ಅವ್ಯವಚ್ಛಿನ್ನಮ್+ಆಗಿ; ಅವ್ಯವಚ್ಛಿನ್ನ=ಎಡೆಬಿಡದ/ ನಿರಂತರವಾದ; ಎಮ್ಮ=ನಮ್ಮ; ಸೋಮ=ಚಂದ್ರ;

**ಹಿರಣ್ಯಗರ್ಭ ಬ್ರಹ್ಮರಿನ್ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಎಮ್ಮ ಸೋಮವಂಶಮ್** =ಹಿರಣ್ಯಗರ್ಭ ಬ್ರಹ್ಮರಿಂದ ಮೊದಲುಗೊಂಡು ಇಂದಿನ ತನಕ ನಿರಂತರವಾಗಿ ಬೆಳೆದುಬಂದಿರುವ ನಮ್ಮ ಸೋಮವಂಶವು ;

ಕುಲ+ಸಂತತಿಗಮ್; ಕುಲ=ಮನೆತನ; ಸಂತತಿ=ಪೀಳಿಗೆ; ಆರುಮ್= ಯಾರೊಬ್ಬರೂ; ಎಡೆ=ನಡುವೆ; ಪಱಿ=ಇಲ್ಲವಾಗು/ಅಳಿದುಹೋಗು; ಕಿಡು+ಅಂತೆ +ಆಗಿ; ಕಿಡು=ನಾಶಗೊಳ್ಳು/ಹಾಳಾಗು/ಇಲ್ಲವಾಗು; ಕಾರಣದ+ಇನ್;

**ಈಗಳ್ ಕುಲಸಂತತಿಗಮ್ ಆರುಮ್ ಇಲ್ಲದೆ ಎಡೆ ಪಱಿದು ಕಿಡುವಂತಾಗಿ ಇರ್ದುದು ಕಾರಣದಿನ್** =ಈಗ ಕುಲದ ಸಂತತಿಯು ಮುಂದುವರಿಯಲು ಮಕ್ಕಳಿಲ್ಲದಂತಾಗಿ ವಂಶದ ಬಳ್ಳಿಯು ಕಡಿದು ತುಂಡಾಗುವ ಕಾಲ ಬಂದೊದಗಿದೆ. ಈ ಕಾರಣದಿಂದ;

ಕ್ಷೇತ್ರ+ಒಳ್; ಕ್ಷೇತ್ರ=ಜಾಗ/ನೆಲೆ;

**ನಿಮ್ಮ ತಮ್ಮನ್ ವಿಚಿತ್ರವೀರ್ಯನ ಕ್ಷೇತ್ರದೊಳ್**=ನಿನ್ನ ತಮ್ಮನಾದ ವಿಚಿತ್ರವೀರ್ಯನ ಜಾಗದಲ್ಲಿ ನಿಂತು;

ಅಪ್ಪ+ಅಂತು; ಅಪ್ಪ=ಆಗುವ; ಅಪ್ಪಂತು=ಆಗುವಂತೆ; ವರಪ್ರಸಾದಮ್+ಅನ್;

ವರ=ಅನುಗ್ರಹ/ಕೊಡುಗೆ; ಪ್ರಸಾದ=ದೇವರಿಗೆ ಸಲ್ಲಿಸಿ ಪಡೆದ ವಸ್ತು; ವರಪ್ರಸಾದ=ಆಸೆಯನ್ನು ಈಡೇರಿಸಲು ಅಗತ್ಯವಾದ ಕೊಡುಗೆಯನ್ನು; ದಯೆ+ಗೆಯ್ವುದು; ದಯೆ=ಕರುಣೆ;

**ಅಂಬಿಕೆಗಮ್ ಅಂಬಾಲೆಗಮ್ ಪುತ್ರರ್ ಅಪ್ಪಂತು ವರಪ್ರಸಾದಮನ್ ದಯೆಗೆಯ್ವುದು** =ಅಂಬಿಕೆ ಮತ್ತು ಅಂಬಾಲಿಕೆಯರಿಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕು;

ಗಂಡನು ಸಾವನ್ನಪ್ಪಿದಾಗ ಹೆಂಡತಿಯು ಮನೆತನದ ಗುರುಹಿರಿಯರ ಸಮ್ಮತಿಯೊಡನೆ ಇಲ್ಲವೇ ಆದೇಶದಂತೆ ಮತ್ತೊಬ್ಬ ಗಂಡಸಿನೊಡನೆ ದೇಹದ ನಂಟನ್ನು ಹೊಂದಿ ಮಕ್ಕಳನ್ನು ಪಡೆಯುವಂತಹ ಆಚರಣೆಯು ಪಾಚೀನ ಜನಸಮುದಾಯದಲ್ಲಿ ಬಳಕೆಯಲ್ಲಿತ್ತು. ಇದನ್ನು 'ನಿಯೋಗ' ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಅಂತೆ=ಹಾಗೆಯೇ; ಅಂತೆ ಗೆಯ್ವೆನ್ ಎಂದು=ಹಾಗೆಯೇ ಮಾಡುತ್ತೇನೆ ಎಂದು;

ತ್ರಿದಶ=ದೇವತೆ; ನರ=ಮಾನವ; ಅಸುರ=ರಕ್ಕಸ; ಉರಗ=ಹಾವು/ನಾಗ; ಗಣ=ಗುಂಪು; ಪ್ರಭು=ಒಡೆಯ;

**ತ್ರಿದಶ ನರ ಅಸುರ ಉರಗ ಗಣ ಪ್ರಭು**=ದೇವತೆಗಳ, ಮಾನವರ, ರಕ್ಕಸರ, ನಾಗದೇವತೆಗಳ ಗುಂಪಿಗೆ ಒಡೆಯನಾದ;

**ನಿಶ್ಚಿತ ತತ್ವಯೋಗಿ**=ಒಳ್ಳೆಯ ಅರಿವನ್ನು ಹೊಂದಿರುವ ರಿಸಿ;

ಯೋಗದ ಬಲ=ಮಯ್ ಮನವನ್ನು ನಿಯಂತ್ರಣದಲ್ಲಿಟ್ಟುಕೊಂಡು ಪಡೆದುಕೊಂಡಿರುವ ಶಕ್ತಿ; ಉಣ್ಮು=ಹೊರಸೂಸು; ಪೊಣ್ಮು=ಹರಡು; ನಿಲೆ=ನಿಲ್ಲಲು;

**ಯೋಗದ ಬಲಮ್ ಉಣ್ಮೆ ಪೊಣ್ಮೆ ನಿಲೆ**=ವ್ಯಾಸ ರಿಸಿಯ ಯೋಗದ ಶಕ್ತಿಯು ಹೊರಹೊಮ್ಮಿ ಹರಡಿಕೊಂಡು ಕಂಗೊಳಿಸುತ್ತಿರಲು ;

ಪುತ್ರ=ಗಂಡು ಮಗು; ವರ+ಅರ್ಥಿ+ಗಳ್+ಆಗಿ; ವರ=ಅನುಗ್ರಹ; ಅರ್ಥಿ=ಬೇಡುವ ವ್ಯಕ್ತಿ; ಕಟ್ಟಿದಿರ್+ಒಳೆ; ಕಟ್ಟಿದಿರು=ಎದುರು; ನಿಂದರನ್=ನಿಂತುಕೊಂಡಿರುವವರನ್ನು; ನಯ=ಪ್ರೀತಿ/ಒಲವು;

**ಪುತ್ರ ವರಾರ್ಥಿಗಳಾಗಿ ತನ್ನ ಕಟ್ಟಿದಿರೊಳೆ ನಿಂದರನ್ ನಯದೆ ನೋಡೆ** =ಮಗನನ್ನು ಪಡೆಯಬೇಕೆಂಬ ಬಯಕೆಯಿಂದ ಬಂದು ತನಗೆ ಎದುರಾಗಿ ನಿಂತಿರುವ ಅಂಬಿಕೆ ಮತ್ತು ಅಂಬಾಲಿಕೆಯನ್ನು ಪ್ರೀತಿಯಿಂದ ವ್ಯಾಸನು ನೋಡಲು;

ಮುನೀಂದ್ರ=ದೊಡ್ಡ ಮುನಿ; ದಿವ್ಯ=ಒಳ್ಳೆಯ/ಉತ್ತಮ; ದೃಷ್ಟಿ=ನೋಟ; ಮಂತ್ರ+ಒಳೆ; ಮಂತ್ರ=ಆಲೋಚನೆ/ವಿಚಾರ;

**ಮುನೀಂದ್ರನ ದಿವ್ಯದೃಷ್ಟಿ ಮಂತ್ರದೊಳೆ**=ವ್ಯಾಸ ಮುನಿಯ ದಿವ್ಯವಾದ ನೋಟದ ಮಹಿಮೆಯಿಂದಾಗಿ;

ಇರ್ವರ್+ಒಳಮ್; ಇರ್ವರ್=ಇಬ್ಬರು; ನವ=ಹೊಸ; ಗರ್ಭ=ಬಸಿರು; ವಿಭ್ರಮ=ಸಡಗರ; ಪೊದಳ್=ಹರಡು/ವ್ಯಾಪಿಸು;

**ಆ ಸತಿಯರ್ ಇರ್ವರೊಳಮ್ ನವಗರ್ಭವಿಭ್ರಮಮ್ ಪೊದಳ್ದುದು**=ಆ ಇಬ್ಬರು ಹೆಂಗಸರಲ್ಲಿಯೂ ಹೊಸದಾಗಿ ಬಸಿರನ್ನು ತಳೆದ ಸಡಗರವು ವ್ಯಾಪಿಸಿತು ;

ಅಂತು=ಆ ರೀತಿ; ದಿವ್ಯ=ಒಳ್ಳೆಯ/ಉತ್ತಮ; ಸಂಯೋಗ=ಕೂಟ/ಕೂಡಿಕೆ; ತಾಳ್=ಹೊಂದು/ಪಡೆ;

**ಅಂತು ದಿವ್ಯಸಂಯೋಗದೊಳ್ ಇರ್ವರುಮ್ ಗರ್ಭಮನ್ ತಾಳ್ದರ್**=ಆ ರೀತಿಯಲ್ಲಿ ವ್ಯಾಸ ಮುನಿಯ ದಿವ್ಯಕೂಟದಿಂದ ಅವರಿಬ್ಬರು ಬಸಿರನ್ನು ತಳೆದರು;

ಮತ್ತೊರ್ವ=ಮತ್ತೊಬ್ಬ; ವರವ್+ಅವ್; ವರಮುವ್=ವರವನ್ನು; ಪೇೞ್ದೊಡೆ=ಹೇಳಲು;

**ಮತ್ತೊರ್ವ ಮಗನನ್ ವರಮಮ್ ಬೇಡು ಎಂದು ಅಂಬಿಕೆಗೆ ಪೇೞ್ದೊಡೆ**= "ಮತ್ತೊಬ್ಬ ಮಗನನ್ನು ಪಡೆಯುವ ವರವನ್ನು ಕೇಳು" ಎಂದು ಸತ್ಯವತಿಯು ಅಂಬಿಕೆಗೆ ಹೇಳಿದಾಗ ;

ಅಲಸು=ಬೇಸರಪಡು/ಉದಾಸೀನ ಮಾಡು; ವ್ಯಾಸಭಟ್ಟಾರಕನ್+ಅಲ್ಲಿಗೆ; ಭಟ್ಟಾರಕ=ಗುರು ಹಿರಿಯರ ಹೆಸರುಗಳ ಕೊನೆಯಲ್ಲಿ ಒಲವು ನಲಿವು ಆದರ ಸೂಚಕವಾಗಿ ಸೇರುವ ಪದ; ವ್ಯಾಸಭಟ್ಟಾರಕ=ಪೂಜ್ಯನಾದ ವ್ಯಾಸ ರಿಸಿ;

**ಆಕೆಯುಮ್ ವ್ಯಾಸಭಟ್ಟಾರಕನಲ್ಲಿಗೆ ಪೋಗಲ್ ಅಲಸಿ**=ಅಂಬಿಕೆಯು ವ್ಯಾಸನ ಬಳಿಗೆ ಮತ್ತೊಮ್ಮೆ ಹೋಗಲು ಇಚ್ಚಿಸದೆ;

ಸೂಟಿಾಯ್ತೆ+ಅನ್; ಸೂಟಿಾಯ್ತೆ=ದಾಸಿ; ತನ್ನ+ವೊಲೆ; ವೊಲ್=ಅಂತೆ/ಹಾಗೆ; ಕಯ್+ಗೆಯ್ದು; ಕಯ್=ಅಲಂಕಾರ/ಸಿಂಗಾರ; ಕಯ್ಗೆಯ್ದು=ಅಲಂಕಾರ ಮಾಡಿ; ಬರ+ಅನ್; ಬರ=ವರ/ಅನುಗ್ರಹ; ಅಟ್ಟು=ಕಳುಹಿಸು;

**ತನ್ನ ಸೂಟಿಾಯ್ತೆಯನ್ ತನ್ನವೊಲೆ ಕಯ್ಗೆಯ್ದು ಬರವನ್ ಬೇಡಲ್ ಅಟ್ಟಿದೊಡೆ** =ತನ್ನ ದಾಸಿಯೊಬ್ಬಳನ್ನು ತನ್ನಂತೆಯೇ ಸಿಂಗಾರಮಾಡಿ, ವರವನ್ನು ಬೇಡಲು ವ್ಯಾಸ ಮುನಿಯ ಬಳಿಗೆ ಕಳುಹಿಸಲು;

ವರದನ್+ಆಗಿ; ವರದ=ವರವನ್ನು ನೀಡುವುದು;

**ಆಕೆಗೆ ವರದನಾಗಿ**=ಆಕೆಗೆ ಮಕ್ಕಳಾಗುವ ವರವನ್ನು ದಯಪಾಲಿಸಿ;

**ವ್ಯಾಸಮುನೀಂದ್ರನ್ ಸತ್ಯವತಿಗಮ್ ಭೀಷ್ಮಂಗಮ್ ಇಂತು ಎಂದನ್**=ವ್ಯಾಸ ಮುನಿಯು ಸತ್ಯವತಿಗೂ ಗಾಂಗೇಯನಿಗೂ ಈ ರೀತಿ ಹೇಳಿದನು;

**ಎನ್ನ ವರಪ್ರಸಾದ ಕಾಲದೊಳ್**=ನಾನು ವರವನ್ನು ನೀಡುವ ಕಾಲದಲ್ಲಿ; ಅಪ್ಪುದಱಿಂದ=ಆದುದರಿಂದ;

**ಎನ್ನಮ್ ಕಂಡು ಅಂಬಿಕೆ ಕಣ್ಣಮ್ ಮುಚ್ಚಿದಳ್ ಅಪ್ಪುದಱಿಂದ**=ನನ್ನನ್ನು ನೋಡಿ ಅಂಬಿಕೆಯು ತನ್ನ ಕಣ್ಣುಗಳನ್ನು ಮುಚ್ಚಿಕೊಂಡಿದ್ದರಿಂದ;

ಸುಂದರ+ಅಂಗನ್+ಆಗಿ+ಉಮ್; ಅಂಗ=ದೇಹ/ಶರೀರ; ಜಾತ್ಯಂಧನ್+ ಅಕ್ಕುಮ್; ಜಾತ್ಯಂಧ=ಹುಟ್ಟುಗುರುಡ/ಹುಟ್ಟುವಾಗಲೇ ಕಣ್ಣುಗಳಿಲ್ಲದವನು; ಅಕ್ಕುಮ್= ಆಗುವುದು;

**ಆಕೆಗೆ ಧೃತರಾಷ್ಟ್ರನ್ ಎಂಬ ಮಗನ್ ಅತ್ಯಂತ ಸುಂದರಾಂಗನಾಗಿಯುಮ್ ಜಾತ್ಯಂಧನಕ್ಕುಮ್**=ಅಂಬಿಕೆಗೆ ಹುಟ್ಟುವ ಧೃತರಾಷ್ಟ್ರನೆಂಬ ಮಗನು ಸುಂದರವಾದ ರೂಪುಳ್ಳವನು ಮತ್ತು ಹುಟ್ಟುಗುರುಡನಾಗಿರುವನು ;

ಮದ್ರೂಪ=ನನ್ನ ರೂಪ; ಪಾಂಡುರ=ಬಿಳಿಯ ಬಣ್ಣ; ಪಾಂಡುರಮ್ ಮಾಡಿದಳ್=ಹೆದರಿಕೆಯಿಂದ ಬಿಳಿಚಿಕೊಂಡಳು;

**ಅಂಬಾಲೆ ಮದ್ರೂಪಮಮ್ ಕಂಡು ಮೊಗಮನ್ ಪಾಂಡುರಮ್ ಮಾಡಿದಳ್ ಅಪ್ಪುದಱಿಂದ**=ನನ್ನ ರೂಪವನ್ನು ಕಂಡು ಅಂಬಾಲೆಯು ಹೆದರಿಕೊಂಡಿದ್ದರಿಂದ ಅವಳ ಮೊಗ ಬಿಳಿಚಿಕೊಂಡಿತು. ಆದುದರಿಂದ;

ಪಾಂಡುರೋಗ+ಸಂಗತನ್+ಉಮ್; ಪಾಂಡುರೋಗ=ಮಯ್ಯಿನ ತೊಗಲೆಲ್ಲವೂ ಬಿಳಿಯ ಬಣ್ಣದ್ದಾಗುವ ತೊನ್ನುರೋಗ; ಸಂಗತ=ಕೂಡಿದ/ಸೇರಿದ; ಭದ್ರ+ಲಕ್ಷಣ+ ಲಕ್ಷಿತನ್+ಉಮ್; ಭದ್ರ=ಮಂಗಳಕರವಾದ; ಲಕ್ಷಣ=ಚೆಲುವು; ಲಕ್ಷಿತನ್= ಹೊಂದಿರುವವನು; ಅತ್ಯಂತ=ಬಹಳ; ಪ್ರತಾಪನ್+ಉಮ್+ಆಗಿ; ಪ್ರತಾಪನ್=ಶಕ್ತಿಶಾಲಿ; ಪಾಂಡುರಾಜನ್+ಎಂಬ; ಮಗನ್+ಅಕ್ಕುಮ್;

**ಆಕೆಗೆ ಪಾಂಡುರೋಗಸಂಗತನುಮ್ ಅನೇಕ ಭದ್ರಲಕ್ಷಣಲಕ್ಷಿತನುಮ್ ಅತ್ಯಂತ ಪ್ರತಾಮನುಮಾಗಿ ಪಾಂಡುರಾಜನೆಂಬ ಮಗನಕ್ಕುಮ್**=ಅಂಬಾಲಿಕೆಗೆ ಪಾಂಡು ರೋಗದಿಂದ ಕೂಡಿದ, ಮಂಗಳಕರವಾದ ಚೆಲುವನ್ನು ಹೊಂದಿರುವ, ದೊಡ್ಡ ಬಲಶಾಲಿಯಾಗಿರುವ ಪಾಂಡುರಾಜನೆಂಬ ಮಗನು ಹುಟ್ಟುವನು ;

ಸೂಱಾಯ್ತೆ+ಅಪ್ಪ+ಆಕೆ; ಅಪ್ಪ=ಆಗಿರುವ;

**ಅಂಬಿಕೆಯ ಸೂಱಾಯ್ತೆಯಪ್ಪಾಕೆ**=ಅಂಬಿಕೆಯ ದಾಸಿಯು ;

ದರಹಸಿತ=ಮುಗುಳ್ನಗೆ; ವದನ+ಅರವಿಂದೆ+ಆಗಿ; ವದನ=ಮೊಗ; ಅರವಿಂದ=ತಾವರೆ/ಕಮಲ; ವದನಾರವಿಂದೆ=ಕಮಲದಂತಹ ಮೊಗವುಳ್ಳವಳು/ಸುಂದರಿ; ಕೈಕೊಳ್=ಸ್ವೀಕರಿಸು/ಪಡೆ;

**ದರಹಸಿತ ವದನಾರವಿಂದೆಯಾಗಿ ಬರವನ್ ಕೈಕೊಂಡಳ್ ಅಪ್ಪುದಱಿಂದ** =ಮುಗುಳ್ನಗೆಯ ಮೊಗದಿಂದ ಕೂಡಿ ವರವನ್ನು ಪಡೆದಳು. ಆದುದರಿಂದ ;

ಅನಂಗ+ಆಕಾರನ್+ಉಮ್; ಅನಂಗ=ಕಾಮದೇವ/ಮದನ; ಆಕಾರ=ರೂಪ; ಆಚಾರವಂತನ್+ಉಮ್; ಬುದ್ಧಿವಂತನ್+ಉಮ್;

**ಆಕೆಯ ಮಗನ್ ವಿದುರನೆಂಬನ್ ಅನಂಗಾಕಾರನುಮ್ ಆಚಾರವಂತನುಮ್ ಬುದ್ಧಿವಂತನುಮ್ ಅಕ್ಕುಮ್**=ದಾಸಿಗೆ ಹುಟ್ಟುವ ಮಗನು ವಿದುರನೆಂಬ ಹೆಸರುಳ್ಳವನಾಗಿಯೂ, ಕಾಮದೇವನಂತೆ ರೂಪವಂತನಾಗಿಯೂ, ಒಳ್ಳೆಯ ನಡೆನುಡಿಯುಳ್ಳವನಾಗಿಯೂ ಜಾಣನಾಗಿಯೂ ಇರುವನು;

ಪೇೞ್ದು=ಹೇಳಿ; ಪುಂಗವ=ನಾಯಕ;

**ಎಂದು ಪೇೞ್ದು ಮುನಿಪುಂಗವನ್ ಪೋದನ್**=ಎಂದು ಹೇಳಿ ದೊಡ್ಡ ರಿಸಿಯಾಗಿದ್ದ ವ್ಯಾಸನು ಅಲ್ಲಿಂದ ತೆರಳಿದನು ;

ಇತ್ತ=ಈ ಕಡೆ; ಸಂತಸ=ಆನಂದ; ಮನದೊಳ್+ಆಗಲ್;

**ಇತ್ತ ವರಮ್ ಪಡೆದ ಸಂತಸಮ್ ಮನದೊಳಾಗಲ್**=ಈ ಕಡೆ ವರವನ್ನು ಪಡೆದ ಆನಂದವು ಮನದಲ್ಲಿ ಉಂಟಾಗಲು ;

ಉತ್ತರ+ಉತ್ತರ+ಅಮ್; ಉತ್ತರ=ಹೆಚ್ಚಾದ; ಉತ್ತರೋತ್ತರ=ಅತಿಶಯವಾದ/ತುಂಬಾ ಒಳ್ಳೆಯದಾದ; ಬಳೆ=ಬೆಳೆ; ಮಾಟ್ಕೆ+ಇಮ್; ಮಾಟ್ಕೆ=ರೀತಿ; ಇಮ್=ಇಂದ; ಗರ್ಭ=ಬಸಿರು;

**ಒಂದು ಉತ್ತರೋತ್ತರಮ್ ಬಳೆವ ಮಾಟಕ್ಕೆಯಿಮ್ ಬಳೆವ ಗರ್ಭಮಮ್ ತಾಳ್ದಿ**=ಅತಿಶಯವಾದ ರೀತಿಯಲ್ಲಿ ಬೆಳೆಯುವಂತೆ ಬೆಳೆದ ಬಸಿರನ್ನು ಹೊಂದಿ;

ಅಂದು=ಆಗ; ಆದರ=ಪ್ರೀತಿ/ಒಲವು; ಬೆರಸು=ಕೂಡು; ಕ್ರಮದೆ=ಒಬ್ಬರ ನಂತರ ಮತ್ತೊಬ್ಬರನ್ನು; ವಿಖ್ಯಾತ=ದೊಡ್ಡ ಹೆಸರನ್ನು ಪಡೆದ; ವಿದುರ+ಅರ್+ಕಳ್+ಅಮ್; ಕಳ್=ಗಳು; ಪೆತ್ತರ್=ಹಡೆದರು;

**ಅಂದು ಆದರಮ್ ಬೆರಸು ಮೂವರು ಕ್ರಮದೆ ವಿಖ್ಯಾತ ಧೃತರಾಷ್ಟ್ರ ಪಾಂಡುರಾಜ ವಿದುರರ್ಕಳಮ್ ಮೂವರನ್ ಪೆತ್ತರ್**=ಅಂದು ಈ ಮೂವರು ಒಲವಿನಿಂದ ಜತೆಗೂಡಿ ಅಂಬಿಕೆ, ಅಂಬಾಲಿಕೆ ಮತ್ತು ದಾಸಿಯು ಅನುಕ್ರಮವಾಗಿ ಹೆಸರಾಂತ ಧೃತರಾಷ್ಟ್ರ, ಪಾಂಡುರಾಜ ಮತ್ತು ವಿದುರನೆಂಬ ಮೂವರು ಮಕ್ಕಳನ್ನು ಹಡೆದರು.

✦

## ಧೃತರಾಷ್ಟ್ರ ಪಾಂಡು ವಿದುರ ಜನನ
## ಪಂಪ ಭಾರತ ಪಠ್ಯ-ಪ್ರಥಮಾಶ್ವಾಸ

ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮವಾರ್ಯವೀರ್ಯನುಮಾಗಿ ಕೆಲವು ಕಾಲಂ ರಾಜ್ಯಲಕ್ಷ್ಮಿಯಂ ತಾಳ್ದಿ ರಾಜಯಕ್ಷ್ಮ ತಪ್ತಶರೀರನಾತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನಾದೊಡೆ ಗಾಂಗೇಯನುಂ ಸತ್ಯವತಿಯುಮತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ ಆತಂಗೆ ಪರಲೋಕಕ್ರಿಯೆಗಳಂ ಮಾಡಿ ರಾಜ್ಯಂ ನಷ್ಟರಾಜಮಾದುದರ್ಕೆ ಮಮ್ಮಲಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್-

**ಮ॥ ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೂಣ್ದ ನ**
**ನ್ನಿಗೆ ಬನ್ನಂ ಬರಲೀಯದಾರ್ತೆಸಗಿದೀ ವಿಖ್ಯಾತಿಯುಂ ಕೀರ್ತಿಯುಂ**
**ಮುಗಿಲಂ ಮುಟ್ಟಿದುದಲ್ತೆ ನಮ್ಮ ಕುಲದೊಳ್ ಮಕ್ಕಳ್ಪೆಱರ್ ನೀನೇ ಜ**
**ಟ್ಟಿಗನೈ ಮುನ್ನಿನೊರಂಟುವೇಡ ಮಗನೇ ಕೈಕೊಳ್ ಧರಾಭಾರಮಂ. ॥81॥**

ವ॥ ಎಂದು ನಿನ್ನನಾನಿನಿತಂ ಕೈಯೊಡ್ಡಿ ಬೇಡಿದೆನೆಂದ ಸತ್ಯವತಿಗಮರಾಪಗಾನಂದನನಿಂತೆಂದಂ॥

**ಕಂ॥ ಕಿಡುಗುಮೆ ರಾಜ್ಯಂ ರಾಜ್ಯದ**
**ತೊಡರ್ಪದೇವಾೞ್ತೆ ಬಾೞ್ತೆ ನನ್ನಿಯ ನುಡಿಯಂ**
**ಕಿಡೆ ನೆಗೞ್ಕೆ ನಾನುಮೆರಡಂ**
**ನುಡಿದೊಡೆ ಹರಿ ಹರ ಹಿರಣ್ಯಗರ್ಭರ್ ನಗರೇ. ॥82॥**

**ಚಂ॥ ಹಿಮಕರನಾತ್ಮಶೀತರುಚಿಯಂ ದಿನನಾಯಕನುಷ್ಣದೀಧಿತಿ**
**ಕ್ರಮಮನಗಾಧ ವಾರಿಯೆ ಗುಣ್ಪನಿಳಾವಧು ತನ್ನ ತಿಣ್ಪನು**
**ತ್ತಮ ಕುಲಶೈಲಮುನ್ನತಿಯನೇಳಿದವಾಗೆ ಬಿಸುಟ್ಕೊಡಂ ಬಿಸು**
**ಟ್ಕಿಮ ಬಿಸುಡೆಂ ಮದೀಯ ಪುರುಷವ್ರತಮೊಂದುಮನೀಗಳಂಬಿಕೇ ॥83॥**

ವ॥ ಎಂದು ತನ್ನ ನುಡಿದ ಪ್ರತಿಜ್ಞೆಯನೇಗೆಯ್ದು ತಪ್ಪಿದನಿಲ್ಲ-

**ಕಂ॥ ರಂಗತ್ತರಂತ ವಾರ್ಧಿ ಚ**
**ಯಂಗಳ್ ತಂತಮ್ಮ ಮೇರೆಯಂ ದಾಂಟುವೊಡಂ**

**ಗಾಂಗೇಯನುಂ ಪ್ರತಿಜ್ಞಾ**
**ಗಾಂಗೇಯನುಮೊರ್ಮೆ ನುಡಿದುದಂ ತಪ್ಪುವರೇ. ॥84॥**

ವ॥ ಅಂತಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಂಮೊಡಂಬಡಿಸಲಾಱದೆ ಸತ್ಯವತಿ ತಾನುಮಾತನುಮಾಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ ವ್ಯಾಸಮುನೀಂದ್ರನೇಗೆಯ್ವುದೇನಂ ತೀರ್ಚುವುದೆಂದೊಡೆ ಸತ್ಯವತಿಯಿಂತೆಂದಳ್ ಹಿರಣ್ಯಗರ್ಭ ಬ್ರಹ್ಮರಿಂ ತಗುಳ್ದವ್ಯವಚ್ಛಿನ್ನಮಾಗಿ ಬಂದ ಸೋಮವಂಶಮೀಗಳೆಮ್ಮ ಕುಲಸಂತತಿಗಮಾರುಮಿಲ್ಲದೆಡೆವಱಿದು ಕಿಡುವಂತಾಗಿ ರ್ದುದದು ಕಾರಣದಿಂ ನಿಮ್ಮ ತಮ್ಮಂ ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ ಪುತ್ರರಪ್ಪಂತು ವರಪ್ರಸಾದಮಂ ದಯೆಗೆಯ್ವುದೆನೆ ಅಂತೆಗೆಯ್ವೆನೆಂದು–

**ಚಂ॥ ತ್ರಿದಶ ನರಾಸುರೋರಗ ಗಣ ಪ್ರಭು ನಿಶ್ಚಿತ ತತ್ತ್ವಯೋಗಿ ಯೋ**
**ಗದ ಬಲಮುಣ್ಮೆ ಪೊಣ್ಮೆ ನಿಲೆ ಪುತ್ರ ವರಾರ್ಥಿಗಳಾಗಿ ತನ್ನ ಕ**
**ಟ್ಟಿದಿರೊಳೆ ನಿಂದರಂ ನಯದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂ**
**ತ್ರದೊಳೆ ಪೊದಟ್ಟುದಾ ಸತಿಯರಿರ್ವರೊಳಂ ನವಗರ್ಭವಿಭ್ರಮಂ. ॥85॥**

ವ॥ ಅಂತು ದಿವ್ಯಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್ ಮತ್ತೊರ್ವ ಮಗನಂ ವರಮಂ ಬೇಡೆಂದಂಬಿಕೆಗೆ ಪೇೞ್ದೊಡಾಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ ಸೂೞೂಯ್ತೆಯಂ ತನ್ನವೊಲೆ ಕಯ್ಗೆಯ್ದು ಬರವಂ ಬೇಡಲಟ್ಟಿದೊಡಾಕೆಗೆ ವರದನಾಗಿ ವ್ಯಾಸಮುನೀಂದ್ರಂ ಸತ್ಯವತಿಗಂ ಭೀಷ್ಮಂಗಮಿಂತೆಂದನೆನ್ನ ವರಪ್ರಸಾದ ಕಾಲದೊಳೆನ್ನಂ ಕಂಡಂಬಿಕೆ ಕಣ್ಣಂ ಮುಚ್ಚಿದಳಪ್ಪುದಱಿಂದಾಕೆಗೆ ಧೃತರಾಷ್ಟ್ರನೆಂಬ ಮಗನತ್ಯಂತ ಸುಂದರಾಂಗನಾಗಿಯುಂ ಜಾತ್ಯಂಧನಕ್ಕುಮಂಬಾಲೆ ಮದ್ರೂಪಮಂ ಕಂಡು ಮೊಗಮಂ ಪಾಂಡುರಂ ಮಾಡಿದಳಪ್ಪುದಱಿಂದಾಕೆಗೆ ಪಾಂಡುರೋಗ ಸಂಗತನುಮನೇಕ ಭದ್ರಲಕ್ಷಣಲಕ್ಷಿತನುಮತ್ಯಂತ ಪ್ರತಾಪನುಮಾಗಿ ಪಾಂಡುರಾಜನೆಂಬ ಮಗನಕ್ಕುಮಂಬಿಕೆಯ ಸೂೞೂಯ್ತೆಯಪ್ಪಾಕೆ ದರಸಹಿತ ವದನಾರವಿಂದೆಯಾಗಿ ಬರವಂ ಕೈಕೊಂಡಳಪ್ಪುದಱಿಂದಾಕೆಯ ಮಗಂ ವಿದುರನೆಂಬನನಂಗಾಕಾರನು ಮಾಚಾರವಂತನುಂ ಬುದ್ಧಿವಂತನುಮಕ್ಕುಮೆಂದು ಪೇೞ್ದು ಮುನಿಪುಂಗವಂ ಪೋದನಿತ್ತಂ–

**ಪೃಥ್ವಿ॥ ವರಂಬಡೆದ ಸಂತಸಂ ಮನದೊಳಾಗಲೊಂದುತ್ತರೋ**
**ತ್ತರಂ ಬಳೆವ ಮಾೞ್ಕೆಯಿಂ ಬಳೆವ ಗರ್ಭಮಂ ತಾಳ್ದಿಯಾ**
**ದರಂ ಬೆರಸು ಪೆತ್ತರಂದು ಧೃತರಾಷ್ಟ್ರ ವಿಖ್ಯಾತ ಪಾಂ**
**ಡುರಾಜ ವಿದುರರ್ಕಳಂ ಕ್ರಮದೆ ಮೂವರು ಮೂವರಂ. ॥86॥**

✦

# ೪. ಕರ್ಣನ ಜನನ

## ಪಾತ್ರಗಳು

**ಕುಂತಿ:** ಶೂರಸೇನ ರಾಜನ ಮಗಳು.

**ಶೂರಸೇನ:** ಯದುವಂಶದ ರಾಜ.

**ಕುಂತಿಭೋಜ:** ಕುಂತಳ ದೇಶದ ರಾಜ. ಕುಂತಿಯ ಸಾಕು ತಂದೆ. ಶೂರಸೇನನ ಸೋದರತ್ತೆಯ ಮಗನಾದ ಕುಂತಿ ಭೋಜನು ತನಗೆ ಮಕ್ಕಳಿಲ್ಲದ್ದರಿಂದ ಕುಂತಿಯು ಚಿಕ್ಕ ವಯಸ್ಸಿನ ಬಾಲೆಯಾಗಿದ್ದಾಗಲೇ ಅವಳನ್ನು ದತ್ತು ಮಗಳನ್ನಾಗಿ ಪಡೆದಿದ್ದನು.

**ದುರ್ವಾಸ:** ಹೆಸರುವಾಸಿಯಾಗಿದ್ದ ಒಬ್ಬ ಮುನಿ.

**ಆದಿತ್ಯ:** ಸೂರ್ಯ. ಗಗನದಲ್ಲಿ ಉರಿಯುವ ಸೂರ್ಯನನ್ನು ಒಬ್ಬ ದೇವತೆಯೆಂದು ಜನಸಮುದಾಯ ಕಲ್ಪಿಸಿಕೊಂಡಿದೆ.

**ಗಂಗಾದೇವಿ:** ಗಂಗಾ ನದಿ. ಗಂಗೆಯನ್ನು ದೇವತೆಗಳಲ್ಲಿ ಒಬ್ಬಳೆಂದು ಜನಸಮುದಾಯ ಕಲ್ಪಿಸಿಕೊಂಡಿದೆ.

**ಸೂತ:** ಕರ್ಣನ ಸಾಕು ತಂದೆ.

**ರಾಧೆ:** ಕರ್ಣನ ಸಾಕು ತಾಯಿ.

**ವಸುಷೇಣ:** ಕರ್ಣನು ಮಗುವಾಗಿದ್ದಾಗ ಇದ್ದ ಹೆಸರು. ಅನಂತರ ಅವನ ಕೀರ್ತಿ ಹಬ್ಬಿದಂತೆಲ್ಲಾ ಕರ್ಣ ಎಂಬ ಹೆಸರು ಬಂದಿತು.

# ಕರ್ಣನ ಜನನ

ಕುಂತಿ ನೆಗಟ್ತೆಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್. ಕುಂತಿಭೋಜನ ಮನೆಯೊಳ್ ಮತ್ತಗಜಗಮನೆ ಯದುವಂಶೋತ್ತಮೆ ಎನೆ ಬಳೆಯುತ್ತ ಇರ್ಪನ್ನೆಗಮ್, ಆ ನಳಿನಾಸ್ಯೆಯ ಗೆಯ್ದ ಒಂದು ಶುಶ್ರೂಷೆ ಮನಂಗೊಳೆ ದುರ್ವಾಸನ್ ವಿಳಸಿತ ಮಂತ್ರಾಕ್ಷರಂಗಳನ್ ದಯೆಯಿಂದಮ್ ಕೊಟ್ಟನ್. ಅಂತು ಕೊಟ್ಟು...

**ದುರ್ವಾಸ:** **ಅಯ್ದು ಮಂತ್ರಾಕ್ಷರಗಳನ್ ಆಹ್ವಾನಮ್ ಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳನ್ ಪಡೆವೆ.**

(ಎಂದು ಬೆಸಸಿದೊಡೆ ಒಂದು ದಿವಸಮ್ ಕೊಂತಿ...)

**ಕುಂತಿ:** **ಈ ಮುನಿಯ ವರದ ಮಹಿಮೆಯನ್ ಎನ್ನ ಇಚ್ಚೆಯೊಳ್ ಪುಚ್ಚವಣಮ್ ನೋಡುವೆನ್...**

(ಎನುತ ಶಫರ ಉಚ್ಚಳಿತ ತರತ್ತರಂಗೆಗೆ ಗಂಗೆಗೆ ಅಂದು ಉಚ್ಚಸ್ತನಿ ಒರ್ವಳೆ ಬಂದಳ್. ಬಂದು ಸುರನದಿಯ ನೀರೊಳ್ ಮಿಂದು ಇನನನ್ ನೋಡಿ...)

**ಕುಂತಿ:** **ನಿನ್ನ ದೊರೆಯನೆ ಮಗನಕ್ಕೆ.**

(ಎಂದು ಆಹ್ವಾನಮ್ ಗೆಯ್ಯಲೊಡಮ್ ಅಂದು ದಲ್ ದಶಶತಕಿರಣನ್ ಧರೆಗಿಟಿದನ್. ಅಂತು ನಭೋಭಾಗದಿನ್ ಭೂಮಿಭಾಗಕ್ಕೆ ಇಟಿದು, ತನ್ನ ಮುಂದೆ ನಿಂದ ಅರವಿಂದ ಬಾಂಧವನನ್ ನೋಡಿ ನೋಡಿ, ಕೊಡಗೂಸುತನದ ಭಯದಿನ್ ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲ್ ಒಟ್ಟುಡಿಯಲ್ ಒಡಗೂಡೆ ಗಂಗೆಯ ಮಡು ಕರೆಗೆ ಅಣ್ಮಿದುದು. ನಾಣ ಪೆಂಪೇನ್ ಪಿರಿದೋ. ಆಗಳ್ ಆದಿತ್ಯನ್ ಆಕೆಯ ಮನದ ಶಂಕೆಯುಮನ್ ನಡುಗುವ ಮೆಯ್ಯ ನಡುಕಮುಮನ್ ಕಿಡೆನುಡಿದು ಇಂತು ಎಂದನ್..)

**ಆದಿತ್ಯ:** **ತರುಣಿ, ಬರಿಸಿದ ಕಾರಣಮ್ ಆವುದೊ?**

**ಕುಂತಿ:** **ಮುನೀಶ್ವರನ ಮಂತ್ರಮ್ ಏದೊರೆಯೆಂದು ಆನ್ ಮರುಳಿಯೆನೆ ಅಱಿದುಮ್ ಅಱಿಯದೆ ಬರಿಸಿದೆನ್. ಇನ್ನು ಏಳಿಮ್.**

**ಆದಿತ್ಯ:** **ಅಂಬುಜಮುಖಿ, ಮುನ್ ಬೇಡಿದ ವರಮನ್ ಕುಡದೆ ಪೋಗಲ್ ಆಗದು. ಎನ್ನ ದೊರೆಯನ್ ಪುತ್ರನ್ ನಿನಗೆ ಅಕ್ಕೆ.**

(ಎಂಬುದುಮ್ ಒದವಿದ ಗರ್ಭದೊಳ್ ಅಂಬುಜಮಿತ್ರನನೆ ಪೋಲ್ವ ಮಗನ್ ಒಗೆತಂದನ್. ತನ್ನೊಳ್ ಒಡವುಟ್ಟಿದ ಮಣಿಕುಂಡಲಮ್ ಒಡವುಟ್ಟಿದ ಸಹಜ ಕವಚಮ್ ಅಮರ್ದು ಇರೆ ತೊಡರ್ದು ಇರೆಯುಮ್ ಬಂದು ಆಗಳ್ ಆ ಬಾಲಿಕೆಯಾ ಆಕೆಯ ನಡುಕಮನ್ ಒಡರಿಸಿದನ್. ಅಂತು ನಡನಡ ನಡುಗಿ ಜಲದೇವತೆಗಳ್ ಅಪ್ಪೊಡಮ್ ಮನಮ್ ಕಾಣ್ಬರ್ ಎಂದು ನಿಧಾನಮನ್ ಈಡಾಡುವಂತೆ ಕೂಸನ್ ಗಂಗೆಯೊಳ್ ಈಡಾಡಿ ಬಂದಳ್. ಇತ್ತ ಗಂಗಾದೇವಿಯುಮ್ ಆ ಕೂಸನ್ ಮುಳುಗಲ್ ಈಯದೆ ತನ್ನ ತೆರೆಗಳ್ ಎಂಬ ನಳಿತೋಳ್ಗಳಿನ್ ಒಯ್ಯನೊಯ್ಯನೆ ತಟ್ಟೈಸಿ ತರೆ, ಗಂಗಾ ತೀರದೊಳ್ ಇರ್ಪ ಸೂತನ್ ಎಂಬನ್ ಕಂಡು...)

**ಸೂತ:** **ಬಾಳ ದಿನೇಶ ಬಿಂಬದ ನೆಟಿಲ್ ಜಲದೊಳ್ ನೆಲಸಿತ್ತೊ... ಮೇಣ್... ಫಣೀಂದ್ರ ಆಳಯದಿಂದಮ್ ಉರ್ಚಿದ ಫಣಾಮಣಿ ಮಂಗಳ ರಶ್ಮಿಯೋ... ಎನ್ನ ಎರ್ದೆಯನ್ ಕರಮ್ ಮೇಳಿಸಿದಪ್ಪುದು..**

(ಎಂದು ಬೊದಿಲ್ಲನೆ ನೀರೊಳ್ ಪಾಯ್ದು, ಆ ಬಾಳನನ್ ಆದಮ್ ಆದರದೆ ಕೊಂಡು, ನಿಧಿ ಕಂಡನಂತೆ ವೋಲ್ ಎಸೆದನ್. ಅಂತು ಕಂಡು ಮನಂಗೊಂಡು ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನ್ ಇಟ್ಟೊಡೆ, ಆಕೆ ರಾಗಿಸಿ ಸುತನ ಸೂತಕಮನ್ ಕೊಂಡಾಡೆ, ಆ ಮಗನ ಅಂದಮ್ ಅಗುಟ್ದಿರಲಾ ಕುಟಿಯೊಳ್ ತೊಟ್ಟಗೆ ನಿಧಿ ಕಂಡಂತೆ ವಸುಧೆಗೆ ಅಸದಳಮ್ ಆಯ್ತು ಎಂದು ಲೋಗರ್ ಬಗೆದು ಇರೆ, ಆಗಳ್ ವಸುಷೇಣನ್ ಎಂಬ ಪೆಸರ್ ಆಯ್ತು. ಅಂತು ಆ ಲೋಕಾಂತಂಬರಮ್ ವಸುಷೇಣನ್ ಅಳವಿ ಬಳೆಯೆ, ಬಳೆದ ಎಸಕಮ್ ಅದು ಓರಂತೆ ಜನಂಗಳ ಕರ್ಣೋಪಾಂತದೊಳ್ ಒಗೆದು ಎಸೆಯೆ, ಕರ್ಣನ್ ಎಂಬನುಮ್ ಆದನ್.)

✦

## ಕರ್ಣನ ಜನನ
## ಪದ ವಿಂಗಡಣೆ ಮತ್ತು ತಿರುಳು

ನೆಗಟ್ತೆ=ಕೀರ್ತಿ; ನೆಗಟ್ತೆಯ=ಕೀರ್ತಿಯನ್ನು ಹೊಂದಿರುವ; ಪುರುಷೋತ್ತಮ =ಕೃಷ್ಣ; ಪಿತಾಮಹ=ತಾತ; ಶೂರಂಗೆ=ಶೂರನಿಗೆ;

**ಕುಂತಿ ನೆಗಳ್ತೆಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್**= ಕುಂತಿಯು ಕೀರ್ತಿವಂತ ಕೃಷ್ಣನ ತಾತನಾದ ಶೂರಸೇನನ ಮಗಳು;

ಕುಂತಿಭೋಜ=ಕುಂತಳ ರಾಜ್ಯದ ಅರಸನಾದ ಭೋಜರಾಜ; ಶೂರಸೇನನ ಮಗಳಾದ ಕುಂತಿಯನ್ನು ಭೋಜರಾಜನು ದತ್ತು ಮಗಳನ್ನಾಗಿ ಪಡೆದಿದ್ದನು; ಮನೆ+ಒಳ್; ಒಳ್=ಅಲ್ಲಿ; ಮತ್ತ=ಸೊಕ್ಕಿದ/ಮದವೇರಿದ; ಗಜ=ಆನೆ; ಗಮನ=ನಡಿಗೆ; ಮತ್ತಗಜಗಮನೆ=ಮದವೇರಿದ ಆನೆಯ ನಡಿಗೆಯಂತೆ ಹೆಜ್ಜೆಯನ್ನು ಇಡುವವಳು. ಈ ರೂಪಕವು ಕುಂತಿಯ ದೇಹದ ಎತ್ತರವಾದ ನಿಲುವನ್ನು ಮತ್ತು ಹರೆಯದ ಉತ್ಸಾಹವನ್ನು ಸೂಚಿಸುತ್ತದೆ; ಯದುವಂಶ+ಉತ್ತಮೆ+ಎನೆ; ಯದುವಂಶ=ಯದು ಕುಲದಲ್ಲಿ ಹುಟ್ಟಿ ಬೆಳೆದವರು; ಉತ್ತಮೆ=ಒಳ್ಳೆಯವಳು; ಎನೆ=ಎನ್ನುವಂತೆ;

**ಕುಂತಿಭೋಜನ ಮನೆಯೊಳ್ ಮತ್ತಗಜಗಮನೆ ಯದುವಂಶೋತ್ತಮೆ ಎನೆ ಬಳೆಯುತ್ತ ಇರ್ಪನ್ನೆಗಮ್**=ಕುಂತಿಭೋಜನ ಮನೆಯಲ್ಲಿ ಮದಿಸಿದ ಆನೆಯ ನಡಿಗೆಯನ್ನು ಹೋಲುವ ಯದುಕುಲದ ಒಳ್ಳೆಯ ಹೆಣ್ಣುಮಗಳಾದ ಕುಂತಿಯು ಬೆಳೆಯುತ್ತಿರುವಾಗ;

ನಳಿನ+ಆಸ್ಯೆ; ನಳಿನ=ತಾವರೆಯ ಹೂವು; ಆಸ್ಯ=ಮೊಗ;ನಳಿನಾಸ್ಯೆ=ತಾವರೆಯ ಮೊಗದವಳು/ಸುಂದರಿ; ಗೆಯ್=ಮಾಡು; ಗೆಯ್ದ=ಮಾಡಿದ; ಶುಶ್ರೂಷೆ=ಸೇವೆ; ಮನಂಗೊಳ್=ಮನವನ್+ಕೊಳ್; ಮನಂಗೊಳ್=ಮನಸ್ಸಿಗೆ ಹಿಡಿಸಲು/ಮನಸ್ಸಿಗೆ ಮೆಚ್ಚುಗೆಯಾಗಲು;

**ಆ ನಳಿನಾಸ್ಯೆಯ ಗೆಯ್ದ ಒಂದು ಶುಶ್ರೂಷೆ ಮನಂಗೊಳೆ**=ಕುಂತಳ ರಾಜ್ಯದ ಭೋಜರಾಜನ ಅರಮನೆಗೆ ದುರ್ವಾಸ ಮುನಿಯು ಬಂದು ಕೆಲದಿನಗಳ ಕಾಲ ತಂಗಿದ್ದಾಗ, ಮುನಿಯನ್ನು ಉಪಚರಿಸುವ ಹೊಣೆಯನ್ನು ಕುಂತಿಗೆ ವಹಿಸಲಾಗಿತ್ತು;

ಆಗ ಕಮಲಮೊಗದ ಅಂದರೆ ಸುಂದರಿಯಾದ ಕುಂತಿಯು ಮಾಡಿದ ಸೇವೆಯು ಮುನಿಯ ಮನಸ್ಸಿಗೆ ಮುದವನ್ನು ಉಂಟುಮಾಡಲು;

ವಿಳಸಿತ=ಮನೋಹರವಾದ; ಮಂತ್ರ+ಅಕ್ಷರಮ್+ಗಳ್+ಅನ್; ಮಂತ್ರ=ವ್ಯಕ್ತಿಯು ತನ್ನ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ದೇವತೆಯ ಮಹಿಮೆಯನ್ನು ಕೊಂಡಾಡುವಾಗ ಉಚ್ಚರಿಸುವಂತಹ ನುಡಿ; ಅಕ್ಷರ=ಉಚ್ಚಾರಣೆಯ ದನಿ ಮತ್ತು ಬರಹದ ಲಿಪಿ; ಅನ್=ಅನ್ನು; ದಯೆ+ಇಂದ+ಅಮ್; ದಯೆ=ಕರುಣೆ;

**ದುರ್ವಾಸನ್ ವಿಳಸಿತ ಮಂತ್ರಾಕ್ಷರಂಗಳನ್ ದಯೆಯಿಂದಮ್ ಕೊಟ್ಟನ್**=ದುರ್ವಾಸ ಮುನಿಯು ಕುಂತಿಗೆ ಮನೋಹರವಾದ ಮಂತ್ರಗಳನ್ನು ಕರುಣಿಸಿದನು;

ಆಹ್ವಾನ=ಕರೆಯುವಿಕೆ; ಗೆಯ್ದು=ಮಾಡಿ; ಬಗೆ=ಮನಸ್ಸು; ಪೋಲ್=ಹೋಲಿಕೆ; ಪಡೆ=ಹೊಂದು; ಬೆಸಸು=ಹೇಳು;

**ಅಯ್ದು ಮಂತ್ರಾಕ್ಷರಂಗಳನ್ ಆಹ್ವಾನಮ್ ಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳನ್ ಪಡೆವೆ ಎಂದು ಬೆಸಸಿದೊಡೆ**=ನಾನು ನಿನಗೆ ಈಗ ಕೊಟ್ಟಿರುವ ಅಯ್ದು ಮಂತ್ರಗಳನ್ನು ನಿನಗೆ ಬೇಕೆಂದಾಗ ಉಚ್ಚರಿಸುತ್ತ, ಆಯಾಯ ಮಂತ್ರದಲ್ಲಿನ ದೇವತೆಯನ್ನು ಕೋರಿಕೊಂಡರೆ, ನಿನ್ನ ಮನಸ್ಸು ಬಯಸುವಂತಹ ಮಕ್ಕಳನ್ನು ನೀನು ಪಡೆಯುತ್ತೀಯೆ ಎಂದು ದುರ್ವಾಸ ಮುನಿಯು ಹೇಳಲು;

**ಒಂದು ದಿವಸಮ್ ಕೊಂತಿ**=ಒಂದು ದಿನ ಕುಂತಿಯು;

ವರ=ಕೊಡುಗೆ; ಮಹಿಮೆ+ಅನ್; ಮಹಿಮೆ=ಬಲ/ಶಕ್ತಿ/ಹೆಚ್ಚುಗಾರಿಕೆ; ಅನ್=ಅನ್ನು; ಎನ್ನ=ನನ್ನ; ಇಚ್ಚೆ+ಒಳ್; ಇಚ್ಚೆ=ಆಸೆ/ಬಯಕೆ; ಪುಚ್ಚವಣ=ಒರೆಹಚ್ಚಿ ನೋಡುವುದು/ಪರಿಶೀಲಿಸುವುದು; ಎನುತಮ್=ಎಂದುಕೊಂಡು;

**ಈ ಮುನಿಯ ವರದ ಮಹಿಮೆಯನ್ ಎನ್ನ ಇಚ್ಚೆಯೊಳ್ ಪುಚ್ಚವಣಮ್ ನೋಡುವೆನ್ ಎನುತಮ್** =ದುರ್ವಾಸ ಮುನಿಯು ಕೊಟ್ಟಿರುವ ಮಂತ್ರಗಳ ಶಕ್ತಿಯನ್ನು ನನ್ನ ಮನಸ್ಸಿಗೆ ತೋಚಿದ ರೀತಿಯಲ್ಲಿ ಒರೆಹಚ್ಚಿ ನೋಡುತ್ತೇನೆ ಎಂದು ತನ್ನಲ್ಲಿಯೇ ಹೇಳಿಕೊಂಡು;

ಉಚ್ಚ=ಉಬ್ಬಿದ/ಎತ್ತರವಾದ; ಸ್ತನ=ಮೊಲೆ; ಉಚ್ಚಸ್ತನಿ=ಉಬ್ಬಿದ ಎದೆಯುಳ್ಳವಳು/ತುಂಬು ಹರೆಯದ ಹೆಣ್ಣು; ಅಂದು=ಆ ದಿನ; ಶಫರ=ಮೀನು; ಉಚ್ಚಳಿಸು=ಮೇಲೆ ನೆಗೆ/ಚಿಮ್ಮು; ತರತ್ತರಂಗೆ=ನೀರಿನ ಅಲೆ ಅಲೆಗಳಿಂದ ಹೊಯ್ದಾಡುತ್ತಿರುವ ನದಿ; ಗಂಗೆ=ಗಂಗಾ ನದಿ; ಒರ್ವಳೆ=ಒಬ್ಬಳೆ;

**ಶಫರ ಉಚ್ಚಳಿತ ತರತ್ತರಂಗೆಗೆ ಗಂಗೆಗೆ ಅಂದು ಉಚ್ಚಸ್ತನಿ ಒರ್ವಳೆ ಬಂದಳ್**=ಹೊಯ್ದಾಡುತ್ತಿರುವ ನೀರಿನ ಅಲೆಗಳ ನಡುವೆ ಮೇಲಕ್ಕೆ ಚಿಮ್ಮುತ್ತಿರುವ ಮೀನುಗಳಿಂದ ಕಂಗೊಳಿಸುತ್ತಿರುವ ಗಂಗಾ ನದಿಯ ಬಳಿಗೆ ಅಂದು ಉಬ್ಬಿದ ಎದೆಯುಳ್ಳ ಕುಂತಿಯು ಒಬ್ಬಳೇ ಬಂದಳು;

ಸುರ=ದೇವತೆ; ಸುರನದಿ=ಗಂಗಾ ನದಿ; ನೀರ್+ಒಳ್; ಮೀ=ಸ್ನಾನ ಮಾಡು; ಇನನ್+ಅನ್; ಇನ=ಸೂರ್ಯ;

**ಬಂದು ಸುರನದಿಯ ನೀರೊಳ್ ಮಿಂದು ಇನನನ್ ನೋಡಿ**=ಗಂಗಾನದಿಯ ಬಳಿಗೆ ಬಂದು, ನದಿಯಲ್ಲಿ ಸ್ನಾನವನ್ನು ಮಾಡಿ ಸೂರ್ಯನನ್ನು ನೋಡುತ್ತಾ;

ದೊರೆ=ಸಮಾನ/ರೀತಿ; ನಿನ್ನ ದೊರೆಯನೆ=ನಿನ್ನಂತೆಯೇ ತೇಜಸ್ಸನ್ನುಳ್ಳ;

ಮಗನ್+ಅಕ್ಕೆ; ಅಕ್ಕೆ=ಆಗಲಿ; ಗೆಯ್ಯಲ್+ಒಡಮ್; ಒಡಮ್=ಕೂಡಲೇ;

**ನಿನ್ನ ದೊರೆಯನೆ ಮಗನಕ್ಕೆ ಎಂದು ಆಹ್ವಾನಮ್ ಗೆಯ್ಯಲೊಡಮ್** =ನಿನ್ನಂತೆಯೇ ತೇಜಸ್ಸನ್ನುಳ್ಳ ಮಗನು ನನಗೆ ಹುಟ್ಟಲಿ ಎಂದು ಕೋರಿಕೊಳ್ಳುತ್ತಿದ್ದಂತೆಯೇ;

ಅಂದು=ಆಗ; ದಲ್=ನಿಜವಾಗಿಯೂ/ದೇವತೆಯ ರೂಪದಲ್ಲಿ; ದಶ=ಹತ್ತು; ಶತ=ನೂರು; ಕಿರಣ=ಕಾಂತಿ; ದಶಶತಕಿರಣ= ಹತ್ತಾರು ಸಾವಿರ ಬೆಳಕಿನ ಕಿರಣಗಳನ್ನು ಹೊರಸೂಸುವ ಸೂರ್ಯ; ಧರೆಗೆ+ಇಟಿದನ್; ಧರೆ=ಭೂಮಿ;

**ಅಂದು ದಲ್ ದಶಶತಕಿರಣನ್ ಧರೆಗಿಟಿದನ್**=ಆಗ ಗಗನಮಂಡಲದಲ್ಲಿ ಸಾವಿರಾರು ಕಿರಣಗಳಿಂದ ಬೆಳಗುತ್ತಿದ್ದ ಸೂರ್ಯನು ದೇವತೆಯ ರೂಪದಲ್ಲಿ ಭೂಮಿಗೆ ಇಳಿದು ಬಂದನು;

ಅಂತು=ಆ ರೀತಿ; ನಭ=ಆಕಾಶ; ಭಾಗದಿನ್=ಕಡೆಯಿಂದ; ಅರವಿಂದ=ತಾವರೆಯ ಹೂವು; ಬಾಂಧವನ್+ಅನ್; ಬಾಂಧವ=ನೆಂಟ; ಅನ್=ಅನ್ನು; ಅರವಿಂದ ಬಾಂಧವ=ಸೂರ್ಯ; ಸೂರ್ಯನ ಕಿರಣಗಳ ನಂಟಿನಿಂದ ತಾವರೆ ಹೂವು ಅರಳುವುದರಿಂದ ಈ ಬಗೆಯ ಹೆಸರಿದೆ;

**ಅಂತು ನಭೋಭಾಗದಿನ್ ಭೂಮಿಭಾಗಕ್ಕೆ ಇಟಿದು, ತನ್ನ ಮುಂದೆ ನಿಂದ ಅರವಿಂದ ಬಾಂಧವನನ್ ನೋಡಿ ನೋಡಿ**=ಆ ರೀತಿಯಲ್ಲಿ ಆಕಾಶದ ಕಡೆಯಿಂದ ಭೂಮಿಗೆ ಇಳಿದು ಬಂದು ತನ್ನ ಮುಂದೆ ನಿಂತುಕೊಂಡ ಸೂರ್ಯನನ್ನು ನೋಡನೋಡುತ್ತ;

ಕೊಡಗುಸು=ಕನ್ಯೆ/ಮದುವೆಯಾಗದ ತರುಣಿ; ಭಯ+ಇನ್; ಭಯ=ಹೆದರಿಕೆ; ಕೊಡಗೂಸುತನದ ಭಯ=ಮದುವೆಯಾಗುವುದಕ್ಕೆ ಮುನ್ನವೇ ಗಂಡಸಿನೊಡನೆ ಕಾಮದ ನಂಟನ್ನು ಪಡೆದರೆ ಯಾವ ಬಗೆಯ ಅಪವಾದಕ್ಕೆ ಗುರಿಯಾಗಬೇಕಾಗುವುದೋ

ಎಂಬ ಹೆದರಿಕೆ; ನಡುಗು=ಕಂಪಿಸು/ಹೆದರಿಕೆಯಿಂದ ತತ್ತರಿಸು; ಕನ್ನಿಕೆ=ಕನ್ಯೆ/ತರುಣಿ; ಬೆಮರ್=ಬೆವರು; ನೀರ್+ಗಳ್; ಬೆಮರ ನೀರ್ಗಳ್=ಬೆವರ ಹನಿಗಳು; ಪೊನಲ್=ಪ್ರವಾಹ; ಒಳ್ಕು=ಹರಿ/ಪ್ರವಹಿಸು; ಒಳ್ಕುಡಿಯಲ್=ತುಂಬಿ ಹರಿಯಲು; ಒಡಗೂಡೆ=ಜತೆ ಸೇರಲು; ಮಡು=ನದಿಯಲ್ಲಿ ನೀರಿನ ಸುಳಿಯೊಡನೆ ಆಳವಾಗಿರುವ ಜಾಗ; ಕರೆ=ದಡ/ತೀರ; ಕರೆಗಣ್ಮಿದುದು=ದಡಗಳ ಮೇಲೆ ಉಕ್ಕಿ ಹರಿಯಿತು;

**ಕೊಡಗೂಸುತನದ ಭಯದಿನ್ ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲ್ ಒಳ್ಕುಡಿಯಲ್ ಗಂಗೆಯ ಒಡಗೂಡೆ ಮಡು ಕರೆಗಣ್ಮಿದುದು**=ಮದುವೆಯಾಗುವುದಕ್ಕೆ ಮುನ್ನವೇ ಮಗುವನ್ನು ಪಡೆಯಲು ಹೆದರಿ ನಡುಗುತ್ತಿರುವ ಕುಂತಿಯ ದೇಹದಿಂದ ಸುರಿಯುತ್ತಿರುವ ಬೆವರ ಹನಿಗಳು ಪ್ರವಾಹರೂಪದಲ್ಲಿ ಹರಿದು ಗಂಗೆಯ ಮಡುವನ್ನು ಸೇರಿದಾಗ, ಮಡುವಿನಿಂದ ಉಕ್ಕೆದ್ದ ನೀರಿನ ಅಲೆಗಳು ಗಂಗಾ ನದಿಯ ಎರಡು ದಡಗಳ ಮೇಲೆ ತುಂಬಿ ಹರಿದವು; ಸೂರ್ಯನನ್ನು ನೇರವಾಗಿ ಕಂಡಾಗ ಕುಂತಿಯ ಮಯ್ ಮನದಲ್ಲಿ ಉಂಟಾದ ಒಳಮಿಡಿತಗಳ ತೀವ್ರತೆಯನ್ನು ಸೂಚಿಸಲು ಈ ರೀತಿ ಅತಿಶಯವಾದ ನುಡಿಗಳನ್ನು ಬಳಸಲಾಗಿದೆ;

ನಾಣ್=ನಾಚಿಕೆ/ಲಜ್ಜೆ; ಪೆಂಪು+ಏನು; ಪೆಂಪು=ಸೊಗಸು/ಹಿರಿಮೆ; ಪಿರಿದು= ದೊಡ್ಡದು/ಮಿಗಿಲಾದುದು/ಮನೋಹರವಾದುದು;

**ನಾಣ ಪೆಂಪೇನ್ ಪಿರಿದೋ**=ನಾಚಿಕೆಯ ಸೊಗಸು ಬಹು ಮನೋಹರವಾದುದು. ಏಕೆಂದರೆ ಯಾವುದೇ ಸನ್ನಿವೇಶದಲ್ಲಿ ವ್ಯಕ್ತಿಯು ನಾಚಿಕೊಂಡಾಗ ಆತನ ಇಲ್ಲವೇ ಆಕೆಯ ಮನದಲ್ಲಿ ಉಂಟಾಗುವ ಒಳಮಿಡಿತಗಳು, ಮೊಗದಲ್ಲಿ ಕಂಡುಬರುವ ಮತ್ತು ಮಯ್ಯಲ್ಲಿ ತಲೆದೋರುವ ಹಾವಭಾವಗಳು ಅಪೂರ್ವವಾದ ಬಗೆಯಲ್ಲಿರುತ್ತವೆ.

ಆದಿತ್ಯ=ಸೂರ್ಯ; ಶಂಕೆ+ಉಮ್+ಅನ್; ಶಂಕೆ=ಅಳುಕು/ಹಿಂಜರಿಕೆ/ಅಂಜಿಕೆ; ಉಮ್=ಊ; ಅನ್=ಅನ್ನು; ನಡುಕಮ್+ಉಮ್+ಅಮ್; ಕಿಡು=ಇಲ್ಲವಾಗು/ಅಳಿ; ಇಂತು=ಈ ರೀತಿ;

**ಆಗಳ್ ಆದಿತ್ಯನ್ ಆಕೆಯ ಮನದ ಶಂಕೆಯುಮನ್ ನಡುಗುವ ಮೆಯ್ಯ ನಡುಕಮುಮನ್ ಕಿಡೆನುಡಿದು ಇಂತು ಎಂದನ್**=ಆಗ ಸೂರ್ಯನು ಕುಂತಿಯ ಮನದ ಹಿಂಜರಿಕೆಯನ್ನು ಮತ್ತು ಮಯ್ಯ ನಡುಕವನ್ನು ಹೋಗಲಾಡಿಸುವಂತೆ ಈ ರೀತಿ ನುಡಿದನು;

ತರುಣಿ=ಹರೆಯದವಳು/ಯುವತಿ; ಕಾರಣ=ಉದ್ದೇಶ; ಆವುದು=ಯಾವುದು;

**ತರುಣಿ, ಬರಿಸಿದ ಕಾರಣಮ್ ಆವುದೊ**=ತರುಣಿಯೇ, ನನ್ನನ್ನು ನಿನ್ನ ಬಳಿಗೆ ಬರುವಂತೆ ನೀನು ಕೋರಿಕೊಳ್ಳಲು ಕಾರಣವೇನು;

ಮುನಿ+ಈಶ್ವರ; ಈಶ್ವರ=ಒಡೆಯ; ಮುನೀಶ್ವರ=ದೊಡ್ಡ ಮುನಿಯಾದ ದುರ್ವಾಸ; ಏದೊರೆ+ಎಂದು; ಏನ್+ದೊರೆ=ಏದೊರೆ; ಏನ್=ಯಾವುದು; ದೊರೆ=ಬಗೆ/ರೀತಿ; ಏದೊರೆ=ಯಾವ ಬಗೆಯದೆಂದು; ಆನ್=ನಾನು; ಮರುಳಿ+ಎನೆ; ಮರುಳು= ತಿಳಿಗೇಡಿತನ; ಮರುಳಿ=ತಿಳಿಗೇಡಿಯಾದ ಹೆಂಗಸು; ಎನೆ=ಎನ್ನುವಂತೆ; ಅಱಿದು+ಉಮ್; ಅಱಿದು=ತಿಳಿದು; ಅಱಿಯದೆ=ತಿಳಿಯದೆ; ಬರಿಸಿದೆನ್=ನಿನ್ನನ್ನು ಕರೆಸಿಕೊಂಡೆನು; ಏಳು=ಮೇಲಕ್ಕೆ ನಿಲ್ಲು;

**ಮುನೀಶ್ವರನ ಮಂತ್ರಮ್ ಏದೊರೆಯೆಂದು ಆನ್ ಮರುಳಿಯೆನೆ ಅಱಿದುಮ್ ಅಱಿಯದೆ ಬರಿಸಿದೆನ್. ಇನ್ನು ಏಟಿಮ್**=ದೊಡ್ಡ ಮುನಿಯಾದ ದುರ್ವಾಸನ ಮಹಿಮೆಯನ್ನು ಅರಿತಿದ್ದರೂ, ಅರಿಯದಂತಹ ತಿಳಿಗೇಡಿಯಾಗಿ ಮುನಿಯು ಕೊಟ್ಟ ಮಂತ್ರ ಯಾವ ಬಗೆಯದೆಂದು ತಿಳಿಯಲು ನಿಮ್ಮನ್ನು ಕರೆಸಿಕೊಂಡೆನು. ಇನ್ನು ನೀವು ಇಲ್ಲಿಂದ ಹೊರಡಿ;

ಅಂಬುಜ=ತಾವರೆಯ ಹೂವು; ಅಂಬುಜಮುಖಿ=ತಾವರೆಯ ಮೊಗದವಳು/ ಸುಂದರಿ; ಮುನ್=ಮೊದಲು; ಬೇಡು=ಯಾಚಿಸು/ಕೇಳು; ವರವ್+ಅನ್; ಕುಡು=ಕೊಡು; ಕುಡದೆ=ಕೊಡದೆ; ಪೋಗು+ಅಲ್; ಪೋಗು=ಹೋಗು; ಆಗದು= ಆಗುವುದಿಲ್ಲ; ಎನ್ನ=ನನ್ನ; ದೊರೆ+ಅನ್; ಅಕ್ಕೆ=ಆಗಲಿ;

**ಅಂಬುಜಮುಖಿ, ಮುನ್ ಬೇಡಿದ ವರಮನ್ ಕುಡದೆ ಪೋಗಲ್** ಆಗದು. ಎನ್ನ **ದೊರೆಯನ್ ಪುತ್ರನ್ ನಿನಗೆ ಅಕ್ಕೆ ಎಂಬುದುಮ್** =ಸುಂದರಿಯೇ, ನೀನು ಈ ಮೊದಲು ಬೇಡಿರುವ ವರವನ್ನು ಕೊಡದೆ ಹಿಂತಿರುಗಲು ಆಗುವುದಿಲ್ಲ. ನಿನ್ನ ಕೋರಿಕೆಯಂತೆಯೇ ನನ್ನ ತೇಜಸ್ಸನ್ನುಳ್ಳ ಒಬ್ಬ ಮಗನು ನಿನ್ನ ಬಸಿರಲ್ಲಿ ಹುಟ್ಟಲಿ ಎಂದು ಹೇಳಲು;

ಒದವು=ಉಂಟಾಗು; ಗರ್ಭ+ಒಳ್; ಗರ್ಭ=ಬಸಿರು; ಒಳ್=ಅಲ್ಲಿ; ಅಂಬುಜಮಿತ್ರ=ಸೂರ್ಯ; ಪೋಲ್=ಹೋಲಿಕೆ; ಒಗೆ=ಹುಟ್ಟು;

**ಒದವಿದ ಗರ್ಭದೊಳ್ ಅಂಬುಜಮಿತ್ರನನೆ ಪೋಲ್ವ ಮಗನ್ ಒಗೆತಂದನ್**= ಕುಂತಿಯ ಬಸಿರಿನಿಂದ ಸೂರ್ಯನ ತೇಜಸ್ಸನ್ನೇ ಹೋಲುವ ಒಬ್ಬ ಮಗ ಹುಟ್ಟಿ ಬಂದನು;

ತನ್ನ+ಒಳ್; ತನ್ನೊಳ್=ತನ್ನಲ್ಲಿ/ತನ್ನ ದೇಹದಲ್ಲಿ; ಒಡನ್+ಪುಟ್ಟಿದ; ಪುಟ್ಟು=ಉಂಟಾಗು; ಒಡವುಟ್ಟಿದ=ಜತೆಯಲ್ಲಿ ಸೇರಿಕೊಂಡಿರುವ; ಮಣಿ+ಕುಂಡಲ +ಅಮ್; ಮಣಿ=ರತ್ನ; ಕುಂಡಲ=ಕಿವಿಗೆ ತೊಡುವ ಓಲೆ; ಸಹಜ=ಹುಟ್ಟಿನಿಂದಲೇ

ಬಂದಿರುವ; ಕವಚ=ಉಕ್ಕಿನ ಅಂಗಿ; ಅಮರ್=ಜತೆಗೂಡು; ಇರೆ=ಇರಲು; ತೊಡರ್=ಅಂಟಿಕೊಳ್ಳು/ಹೊಂದಿಕೊಳ್ಳು; ಇರೆಯುಮ್=ಇರಲು;

**ತನ್ನೊಳ್ ಒಡವುಟ್ಟಿದ ಮಣಿಕುಂಡಲಮ್ ಒಡವುಟ್ಟಿದ ಸಹಜ ಕವಚಮ್ ಅಮರ್ದು ಇರೆ ತೊಡರ್ದು ಇರೆಯುಮ್**=ಸೂರ್ಯನ ವರಪ್ರಸಾದದಿಂದ ಹುಟ್ಟಿದ ಮಗುವಿನ ಕಿವಿಯಲ್ಲಿ ರತ್ನದ ಓಲೆಗಳು ಜತೆಗೂಡಿರಲು ಮತ್ತು ಮಗುವಿನ ಮಯ್ ಮೇಲೆ ಹೊನ್ನಿನ ಲೋಹದ ಅಂಗಿಯು ಅಂಟಿಕೊಂಡಿರಲು;

ಆಗಳ್=ಆ ಸಮಯದಲ್ಲಿ; ಬಂದು=ಕುಂತಿಯ ಹತ್ತಿರಕ್ಕೆ ಬಂದು; ಒಡರಿಸು=ನೀಗಿಸು/ನಿವಾರಿಸು/ಪರಿಹರಿಸು;

**ಆಗಳ್ ಬಂದು ಆ ಬಾಲಿಕೆಯಾ ಆಕೆಯ ನಡುಕಮನ್ ಒಡರಿಸಿದನ್**=ಆಗ ಬಳಿಗೆ ಬಂದ ಸೂರ್ಯನು ಕುಂತಿಯ ಮಯ್ ಮನದ ನಡುಕವನ್ನು ಅಂದರೆ ಆಕೆಯು ಹೆದರಿಕೆಯಿಂದ ಮತ್ತು ಲಜ್ಜೆಯಿಂದ ಪಡುತ್ತಿದ್ದ ಸಂಕಟವನ್ನು ನಿವಾರಿಸಿದನು;

ಅಂತು=ಆ ರೀತಿ; ನಡನಡ=ದೇಹವು ಕಂಪಿಸುತ್ತಿರುವುದನ್ನು ಸೂಚಿಸುವ ಅನುಕರಣ ಪದಗಳು; ನಡುಗಿ=ಕಂಪಿಸುತ್ತ;

**ಅಂತು ನಡನಡ ನಡುಗಿ**=ಆ ರೀತಿಯಲ್ಲಿ ಮಗುವನ್ನು ಹೆತ್ತಿದ್ದಕ್ಕಾಗಿ ಸಮಾಜದಲ್ಲಿ ಅಪಮಾನವುಂಟಾಗುವುದೆಂಬ ಹೆದರಿಕೆಯ ತೀವ್ರತೆಯಿಂದ ಗಡಗಡನೆ ನಡುಗುತ್ತ; ಜಲದೇವತೆ=ನೀರಿನ ದೇವತೆ. ನಿಸರ್ಗದಲ್ಲಿ ಕಂಡುಬರುವ ಉರಿಯುವ ಸೂರ್ಯ, ಬೆಳಗುವ ಚಂದ್ರ, ಜೀವಿಗಳಿಗೆ ಆಸರೆಯಾಗಿರುವ ಭೂಮಿ, ಬೀಸುವ ಗಾಳಿ, ದಹಿಸುವ ಬೆಂಕಿ, ಹರಿಯುವ ನೀರು– ಇವೆಲ್ಲವನ್ನೂ ಒಂದೊಂದು ದೇವತೆಯ ಹೆಸರಿನಲ್ಲಿ ಕಲ್ಪಿಸಿಕೊಂಡು ಜನಸಮುದಾಯ ಪೂಜಿಸುತ್ತಿದೆ; ಅಪ್ಪೊಡಮ್=ಆದರೂ; ಮನಮ್=ನನ್ನ ಮನಸ್ಸನ್ನು/ನನ್ನ ಉದ್ದೇಶವನ್ನು; ಕಾಣ್=ನೋಡು;

**ಜಲದೇವತೆಗಳ್ ಅಪ್ಪೊಡಮ್ ಮನಮ್ ಕಾಣ್ಬರ್ ಎಂದು**='ದುರ್ವಾಸ ಮುನಿಯು ಕೊಟ್ಟ ವರದ ಮಹಿಮೆಯನ್ನು ಒರೆಹಚ್ಚಿ ನೋಡಬೇಕೆಂಬ ಕುತೂಹಲದಿಂದ ಈ ರೀತಿ ಸೂರ್ಯನನ್ನು ಕೋರಿಕೊಂಡೆನೇ ಹೊರತು ನಿಜವಾಗಿಯೂ ಮಗನನ್ನು ಪಡೆಯಬೇಕೆಂಬ ಉದ್ದೇಶದಿಂದಲ್ಲ' ಎಂಬ ನನ್ನ ಮನದ ನಿಜ ಸಂಗತಿಯನ್ನು ಜಲದೇವತೆಗಳಾದರೂ ತಿಳಿದುಕೊಳ್ಳುತ್ತಾರೆ ಎಂಬ ನಿಲುವನ್ನು ಕುಂತಿಯು ತಳೆದು;

ನಿಧಾನಮ್+ಅನ್; ನಿಧಾನ=ಸಂಪತ್ತು; ಈಡಾಡು+ಅಂತೆ; ಈಡಾಡು=ಬಿಸಾಡು/ ಚೆಲ್ಲಾಡು; ಕೂಸು=ಮಗು; ಗಂಗೆ+ಒಳ್;

**ನಿಧಾನಮನ್ ಈಡಾಡುವಂತೆ ಕೂಸನ್ ಗಂಗೆಯೊಳ್ ಈಡಾಡಿ ಬಂದಳ್**=ಸಂಪತ್ತನ್ನು ಬಿಸಾಡುವಂತೆ ತನ್ನ ಮಡಿಲಲ್ಲಿ ಇದ್ದ ಮಗುವನ್ನು ಗಂಗಾ ನದಿಯ ಮಡಿಲಿಗೆ ಬಿಸಾಡಿ ಅರಮನೆಗೆ ಹಿಂತಿರುಗಿದಳು;

ಇತ್ತ=ಈ ಕಡೆ; ಗಂಗಾದೇವಿ+ಉಮ್; ಈ=ನೀಡು; ಈಯದೆ=ಅವಕಾಶವನ್ನು ನೀಡದೆ;

**ಇತ್ತ ಗಂಗಾದೇವಿಯುಮ್ ಆ ಕೂಸನ್ ಮುಳುಗಲ್ ಈಯದೆ**=ತನ್ನ ಮಡಿಲಲ್ಲಿ ಬಿದ್ದ ಕೂಸನ್ನು ಗಂಗಾದೇವಿಯು ನೀರಿನಲ್ಲಿ ಮುಳುಗಲು ಬಿಡದೆ;

ತೆರೆ=ಅಲೆ/ತರಂಗ; ನಳಿ+ತೋಳ್+ಗಳ್+ಇನ್; ನಳಿ=ಕೋಮಲವಾದ; ಒಯ್ಯನ್+ಒಯ್ಯನೆ; ಒಯ್=ತೆಗೆದುಕೊಂಡು ಹೋಗು; ಒಯ್ಯನೆ=ನೆಟ್ಟನೆ/ನೇರವಾಗಿ; ತಟ್ಕೈಸು=ಅಪ್ಪು/ಆಲಂಗಿಸು;

**ತನ್ನ ತೆರೆಗಳ್ ಎಂಬ ನಳಿತೋಳ್ಗಳಿನ್ ಒಯ್ಯನೊಯ್ಯನೆ ತಟ್ಕೈಸಿ ತರೆ**=ಗಂಗಾದೇವಿಯ ತನ್ನ ಅಲೆಗಳೆಂಬ ಕೋಮಲವಾದ ಕಯ್ಗಳಿಂದ ಮಗುವನ್ನು ಅಪ್ಪಿಕೊಂಡು, ನೀರಿನಾಳದಲ್ಲಿ ಮಗು ಮುಳುಗದಂತೆ ಅಲೆಗಳ ಮೇಲೆಯೇ ತೇಲಿಸಿಕೊಂಡು ಮುಂದೆ ಮುಂದೆ ತರುತ್ತಿರಲು;

ತೀರ+ಒಳ್; ತೀರ=ದಡ/ದಂಡೆ; ಇರ್ಪ=ಇರುವ;

**ಗಂಗಾ ತೀರದೊಳ್ ಇರ್ಪ ಸೂತನ್ ಎಂಬನ್ ಕಂಡು**=ಗಂಗಾ ನದಿಯ ದಂಡೆಯಲ್ಲಿದ್ದ ಸೂತನೆಂಬುವನು ನೀರಿನಲ್ಲಿ ತೇಲಿಬರುತ್ತಿರುವ ಮಗುವನ್ನು ಕಂಡು;

ಬಾಳ=ಎಳೆಯ/ಮಗು; ದಿನೇಶ=ಸೂರ್ಯ; ಬಿಂಬ=ಮಂಡಲ; ನೆಟಲ್=ಪ್ರತಿರೂಪ; ಜಲ+ಒಳ್; ನೆಲಸು=ತಂಗು/ನೆಲೆಯಾಗಿ ನಿಲ್ಲುವುದು;

**ಬಾಳ ದಿನೇಶ ಬಿಂಬದ ನೆಟಲ್ ಜಲದೊಳ್ ನೆಲಸಿತ್ತೊ**=ಬಾಲ ಸೂರ್ಯನ ಬಿಂಬದ ನೆರಳು ನೀರಿನಲ್ಲಿ ನೆಲೆಸಿದೆಯೋ; ಮೇಣ್=ಇಲ್ಲವೇ;

ಫಣೀಂದ್ರ=ಹಾವುಗಳ ಒಡೆಯನಾದ ಆದಿಶೇಶ; ಆಳಯ+ಇಂದ+ಅಮ್; ಆಳಯ=ನೆಲೆವೀಡು; ಫಣೀಂದ್ರಾಳಯ=ನಾಗಲೋಕ; ಉರ್ಚು=ಹೊರಕ್ಕೆ ಚಾಚು/ಸೀಳಿಕೊಂಡು ಬರು; ಫಣಾ=ಹಾವಿನ ಹೆಡೆ; ಮಣಿ=ರತ್ನ; ಫಣಾಮಣಿ=ಹಾವಿನ ಹೆಡೆಯಲ್ಲಿ ರತ್ನವಿದೆಯೆಂಬ ಕಲ್ಪನೆಯು ಪುರಾಣದ ಕತೆಗಳಲ್ಲಿ ಕಂಡುಬರುತ್ತದೆ; ಮಂಗಳ=ಒಳಿತನ್ನು ಉಂಟುಮಾಡುವುದು; ರಶ್ಮಿ=ಕಿರಣ;

**ಫಣೀಂದ್ರ ಆಳಯದಿಂದಮ್ ಉರ್ಚಿದ ಫಣಾಮಣಿ ಮಂಗಳ ರಶ್ಮಿಯೋ** = ನಾಗಲೋಕದ ಆದಿಶೇಷನ ಹೆಡೆಯಿಂದ ಹೊರಹೊಮ್ಮಿದ ನಾಗಮಣಿಯ ಕಿರಣಗಳೋ;

ಎನ್ನ=ನನ್ನ; ಎರ್ದೆ+ಅನ್; ಎರ್ದೆ=ಮನಸ್ಸು/ಚಿತ್ತ; ಕರ=ಅತಿ ಹೆಚ್ಚಾಗಿ; ಮೇಳಿಸಿತು+ಅಪ್ಪುದು; ಮೇಳಿಸು=ಸೆಳೆ; ಅಪ್ಪುದು=ಆಗುವುದು;

**ಎನ್ನ ಎರ್ದೆಯನ್ ಕರಮ್ ಮೇಳಿಸಿದಪ್ಪುದು ಎಂದು**=ನನ್ನ ಮನಸ್ಸನ್ನು ಬಹಳವಾಗಿ ಸೆಳೆಯುತ್ತಿದೆ ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ;

ಬೊದಿಲ್+ಎನೆ; ಬೊದಿಲ್=ವ್ಯಕ್ತಿಯು ನದಿಯೊಳಕ್ಕೆ ಹಾರಿ ನೀರಿನ ಮೇಲೆ ಬಿದ್ದಾಗ ಉಂಟಾಗುವ ಶಬ್ದವನ್ನು ಸೂಚಿಸುವ ಪದ; ಎನೆ=ಎನ್ನುವಂತೆ; ನೀರ್+ಒಳ್; ಪಾಯ್=ದುಮುಕು/ಜಿಗಿ;

**ಬೊದಿಲ್ಲೆನೆ ನೀರೊಳ್ ಪಾಯ್ದು**=ಮರುಗಳಿಗೆಯಲ್ಲಿಯೇ ನೀರಿನೊಳಕ್ಕೆ ದುಮುಕಿ;

ಬಾಳನ್+ಅನ್; ಬಾಳ=ಆದಮ್=ಅತಿಶಯವಾದ; ಆದರ=ಒಲವು;

**ಆ ಬಾಳನನ್ ಆದಮ್ ಆದರದೆ ಕೊಂಡು**=ಆ ಮಗುವನ್ನು ಅತಿ ಹೆಚ್ಚಿನ ಒಲವಿನಿಂದ ಎತ್ತಿಕೊಂಡು;

ನಿಧಿ=ಸಂಪತ್ತು/ಭೂಮಿಯೊಳಗೆ ಹೂತಿಟ್ಟ ಹಣ, ಒಡವೆ, ಬೆಲೆಬಾಳುವ ವಸ್ತು; ಕಂಡನ್+ಅಂತೆ; ವೋಲ್=ಹಾಗೆ/ಅಂತೆ; ಒಸೆ=ಹಿಗ್ಗು;

**ನಿಧಿ ಕಂಡನಂತೆ ವೋಲ್ ಒಸೆದನ್**=ಭೂಮಿಯೊಳಗೆ ಹೂತಿಟ್ಟಿದ್ದ ಸಂಪತ್ತನ್ನು ಕಂಡವನಂತೆ ಅಪಾರವಾದ ಆನಂದದಿಂದ ಹಿಗ್ಗಿದನು;

ಅಂತು=ಆ ರೀತಿ; ಮನವ್+ಕೊಂಡು; ಮನಂಗೊಂಡು=ಮನದಲ್ಲಿ ಮೆಚ್ಚಿದವನಾಗಿ; ರಾಧೆ+ಎಂಬ; ನಲ್ಲೆ=ಹೆಂಡತಿ; ಸೋಂಕಿಲ್+ಒಳ್; ಸೋಂಕಿಲ್=ಸೀರೆಯ ಮಡಿಲು/ಸೀರೆಯ ಉಡಿ; ಇಟ್ಟೊಡೆ=ಇಟ್ಟರೆ;

**ಅಂತು ಕಂಡು ಮನಂಗೊಂಡು ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನ್ ಇಟ್ಟೊಡೆ**=ಆ ರೀತಿ ಮನದಲ್ಲಿಯೇ ಮುದಗೊಂಡು ಗಂಗೆಯ ಮಡಿಲಿನಿಂದ ಆ ಮಗುವನ್ನು ಎತ್ತಿಕೊಂಡು ಮನೆಗೆ ತಂದು ತನ್ನ ಹೆಂಡತಿ ರಾಧೆಯ ಮಡಲಿನಲ್ಲಿ ಮಗುವನ್ನು ಇಟ್ಟಾಗ;

ರಾಗ=ಪ್ರೀತಿ; ಸುತ=ಮಗ; ಸೂತಕಮ್+ಅನ್; ಸೂತಕ=ಮಗು ಹುಟ್ಟಿದಾಗ ಉಂಟಾಯಿತೆಂದು ತಿಳಿಯುವ ಕೊಳೆ; ಕೊಂಡು+ಆಡೆ; ಕೊಂಡಾಡು=ಆಚರಿಸು/ವ್ಯವಹರಿಸು;

**ಆಕೆ ರಾಗಿಸಿ ಸುತನ ಸೂತಕಮನ್ ಕೊಂಡಾಡೆ**=ಆಕೆಯು ಮಗುವನ್ನು ತನ್ನ ಬಸಿರಲ್ಲಿ ಹುಟ್ಟಿದ ಮಗನೆಂದೇ ಪ್ರೀತಿಯಿಂದ ಕಂಡು, ಮಗು ಹುಟ್ಟಿದಾಗ ಉಂಟಾಗುವ ಸೂತಕವನ್ನು ಕಳೆದುಕೊಳ್ಳಲು ಮಾಡಬೇಕಾದ ಆಚರಣೆಗಳನ್ನು ಮಾಡಲು;

ಅಂದ=ರೀತಿ; ಅಗುಟ್ದಿರಲ್+ಆ; ಅಗುಟ್=ಅಗೆ/ತೋಡು; ಅಗುಟ್ದಿರಲ್=ತೋಡುತ್ತಿರುವ; ಕುಟಿ+ಒಳ್; ಕುಟಿ=ಗುಂಡಿ; ತೊಟ್ಟಗೆ=ಇದ್ದಕ್ಕಿದ್ದಂತೆಯೇ; ನಿಧಿ=ಸಂಪತ್ತು; ಕಂಡ+ಅಂತೆ;

**ಆ ಮಗನ ಅಂದಮ್ ಅಗುಳ್ದರಲಾ ಕುಳಿಯೊಳ್ ತೊಟ್ಟಗೆ ನಿಧಿ ಕಂಡಂತೆ**=ದಂಪತಿಗಳಿಗೆ ಆ ಮಗು ದೊರಕಿದ ರೀತಿಯು ತೋಡುತ್ತಿರುವ ಗುಂಡಿಯೊಂದರಲ್ಲಿ ಇದ್ದಕ್ಕಿದ್ದಂತೆಯೇ ಅಪಾರವಾದ ಸಂಪತ್ತು ಕಂಡುಬಂದಂತಾಯಿತು;

ವಸುಧೆ=ಭೂಮಂಡಲ; ಅಸದಳ=ಅತಿಶಯ; ಲೋಗರ್=ಜನರು; ಬಗೆ=ತಿಳಿ/ಎಣಿಸು; ಇರೆ=ಇರಲು;

**ವಸುಧೆಗೆ ಅಸದಳಮ್ ಆಯ್ತು ಎಂದು ಲೋಗರ್ ಬಗೆದು ಇರೆ**=ಇಂತಹ ಅಂದಚೆಂದದ ಮಗು ಸಿಕ್ಕಿದ್ದು ಭೂಮಂಡಲದಲ್ಲಿಯೇ ಅತಿಶಯವಾದುದು ಎಂದು ಜನರೆಲ್ಲರೂ ಮಾತನಾಡಿಕೊಳ್ಳುತ್ತಿರಲು; ಪೆಸರ್=ಹೆಸರು;

**ಆಗಳ್ ವಸುಷೇಣನ್ ಎಂಬ ಪೆಸರ್ ಆಯ್ತು**=ಇದರಿಂದಾಗಿ ಆ ಮಗುವಿಗೆ ವಸುಷೇಣ ಎಂಬ ಹೆಸರು ಬಂದಿತು; 'ವಸು' ಎಂದರೆ ರತ್ನ, ಚಿನ್ನ, ಸಂಪತ್ತು ಎಂಬ ತಿರುಳಿಗಳಿವೆ. ಮಗುವಿನೊಡನೆ ರತ್ನದ ಹರಳುಗಳಿಂದ ಕೂಡಿದ ಓಲೆ ಮತ್ತು ಚಿನ್ನದ ಕವಚಗಳು ದೊರೆತಿದ್ದರಿಂದ ಈ ಮಗುವಿಗೆ ವಸುಷೇಣ ಹೆಸರು ಬಂತು;

ಅಂತು=ಆ ರೀತಿ; ಲೋಕ+ಅಂತವ್+ಬರವ್; ಲೋಕ=ಪ್ರಪಂಚ; ಅಂತ=ಕೊನೆ; ಬರಮ್=ವರೆಗೆ; ಅಳವಿ=ಬಲ/ಶಕ್ತಿ; ಬಳೆ=ಬೆಳೆ;

**ಅಂತು ಆ ಲೋಕಾಂತಂಬರಮ್ ವಸುಷೇಣನ್ ಅಳವಿ ಬಳೆಯೆ**=ಆ ರೀತಿ ಲೋಕದ ಎಲ್ಲೆಡೆಯಲ್ಲಿಯೂ ವಸುಷೇಣನ ಕೀರ್ತಿಯು ಹಬ್ಬಿರಲು;

ಎಸಕ=ಪರಾಕ್ರಮ/ಪ್ರತಾಪ; ಓರಂತೆ=ಒಂದೇ ಸಮನೆ/ನಿರಂತರವಾಗಿ; ಕರ್ಣ+ಉಪಾಂತ+ಒಳ್; ಕರ್ಣ=ಕಿವಿ; ಉಪಾಂತ=ಹತ್ತಿರ/ಸಮೀಪ; ಕರ್ಣೋಪಾಂತ=ಕಿವಿಯ ವರೆಗೂ/ಕಿವಿಯಿಂದ ಕಿವಿಗೆ ಎನ್ನುವುದು ಒಂದು ನುಡಿಗಟ್ಟು, ಜನರು ತಾವು ಕೇಳಿದ ಸಂಗತಿಯನ್ನು ಮತ್ತೊಬ್ಬರಿಗೆ ಹೇಳುತ್ತಿರಲು, ಅಂತಹ ಸುದ್ದಿಯು ಬಹುಬೇಗ ಎಲ್ಲೆಡೆಯಲ್ಲಿಯೂ ಹರಡುವುದು ಎಂಬ ತಿರುಳನ್ನು ಹೊಂದಿದೆ; ಒಗೆ=ಹುಟ್ಟು/ಕಾಣಿಸಿಕೊಳ್ಳು; ಎಸೆ=ಕಂಗೊಳಿಸಲು; ಎಂಬನುಮ್=ಎನ್ನುವವನು;

**ಬಳೆದ ಎಸಕಮ್ ಅದು ಓರಂತೆ ಜನಂಗಳ ಕರ್ಣೋಪಾಂತದೊಳ್ ಒಗೆದು ಎಸೆಯೆ, ಕರ್ಣನ್ ಎಂಬನುಮ್ ಆದನ್**=ವಸುಷೇಣನ ಪರಾಕ್ರಮದ ಕೀರ್ತಿಯು ಕಿವಿಯಿಂದ ಕಿವಿಗೆ ಹಬ್ಬುತ್ತ ಜನಸಮುದಾಯದ ಮಾತುಕತೆಯಲ್ಲಿ ಬಳಕೆಯಾಗುತ್ತಿರಲು ಕರ್ಣನೆಂಬ ಮತ್ತೊಂದು ಹೆಸರನ್ನು ಪಡೆದನು.

✦

## ಕರ್ಣನ ಜನನ
## ಪಂಪ ಭಾರತ ಪದ್ಯ–ಪ್ರಥಮಾಶ್ವಾಸ

**ಕಂ॥ ಮತ್ತಿತ್ತ ನೆಗಟ್ತೆಯ ಪುರು**
**ಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್**
**ಮತ್ತಗಜಗಮನೆ ಯದುವಂ**
**ಶೋತ್ತಮೆಯೆನೆ ಕುಂತಿ ಕುಂತಿಭೋಜನ ಮನೆಯೊಳ್. ॥88॥**

**ಬಳೆಯುತ್ತಿರ್ಪನ್ನೆಗಮಾ**
**ನಳಿನಾಸ್ಯೆಯ ಗೆಯ್ದುದೊಂದು ಶುಶ್ರೂಷೆ ಮನಂ**
**ಗೊಳೆ ಕೊಟ್ಟಂ ದುರ್ವಾಸಂ**
**ವಿಳಸಿತ ಮಂತ್ರಾಕ್ಷರಂಗಳಂ ದಯೆಯಿಂದಂ ॥89॥**

ವ॥ ಅಂತು ಕೊಟ್ಟಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೊಂದು ದಿವಸಂ ಕೊಂತಿ–

**ಕಂ॥ ಪುಚ್ಚವಣಂ ನೋಡುವೆನೆ**
**ನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯನೆನುತಂ**
**ದುಚ್ಚಸ್ತನಿ ಗಂಗೆಗೆ ಶಫ**
**ರೋಚ್ಚಳಿತ ತರತ್ತರಂಗೆಗೊರ್ವಳೆ ಬಂದಳ್. ॥90॥**

**ಬಂದು ಸುರನದಿಯ ನೀರೊಳ್**
**ಮಿಂದಿನನಂ ನೋಡಿ ನಿನ್ನ ದೊರೆಯನೆ ಮಗನ**
**ಕ್ಕೆಂದಾಹ್ವಾನಂಗೆಯ್ಯಲೊ**
**ಡಂ ದಲ್ ಧರೆಗಿೞಿದನಂದು ದಶಶತಕಿರಣಂ. ॥91॥**

ವ॥ ಅಂತು ನಭೋಭಾಗದಿಂ ಭೂಮಿಭಾಗಕ್ಕಿೞಿದು ತನ್ನ ಮುಂದೆ ನಿಂದರವಿಂದ ಬಾಂಧವನಂ ನೋಡಿ ನೋಡಿ–

ಕಂ॥ ಕೊಡಗೂಸುತನದ ಭಯದಿಂ
ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲೊ
ಳ್ಕುಡಿಯಲೊಡಗೂಡೆ ಗಂಗೆಯ
ಮಡು ಕರೆಗಣ್ಮೆದುದು ನಾಣ ಪೆಂಪೇಂ ಪಿರಿದೋ. ॥92॥

ವ॥ ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕುಮುಮಂ ಕಿಡೆನುಡಿದಿಂತೆಂದಂ–

ಕಂ॥ ಬರಿಸಿದ ಕಾರಣಮಾವುದೊ
ತರುಣಿ ಮುನೀಶ್ವರನ ಮಂತ್ರಮೇ ದೊರೆಯೆಂದಾಂ
ಮರುಳಿಯೆನೆಯಱಿದುಮಱಿಯದೆ
ಬರಿಸಿದೆನ್ನಿನ್ನೇಱಿಮೆಂದೊಡಾಗದು ಪೋಗಲ್. ॥93॥

ಮುಂ ಬೇಡಿದ ವರಮಂ ಕುಡ
ದಂಬುಜಮುಖಿ ಪುತ್ರನೆನ್ನ ದೊರೆಯಂ ನಿನಗ
ಕ್ಕಂಬುದುಮೊದವಿದ ಗರ್ಭದೊ
ಳಂಬುಜಮಿತ್ರನನೆ ಪೋಲ್ವ ಮಗನೊಗೆತಂದಂ ॥94॥

ಒಡವುಟ್ಟಿದ ಮಣಿಕುಂಡಲ
ಮೊಡವುಟ್ಟಿದ ಸಹಜಕವಚಮುಮರ್ದಿರೆ ತನ್ನೊಳ್
ತೊಡರ್ದಿರೆಯುಂ ಬಂದಾಕೆಯ
ನಡುಕಮನೊಡರಿಸಿದನಾಗಳಾ ಬಾಲಿಕೆಯಾ. ॥95॥

ವ॥ ಅಂತು ನಡನಡನಡುಗಿ ಜಲದೇವತೆಗಳಪ್ಪೊಡಂ ಮನಂಗಾಣ್ಬರೆಂದು ನಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುೞುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟೈಸಿ ತರೆ ಗಂಗಾತೀರದೊಳಿರ್ಪ ಸೂತನೆಂಬಂ ಕಂಡು–

ಉ॥ ಬಾಳದಿನೇಶಬಿಂಬದ ನೆಟಿಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂ
ದ್ರಾಳಯದಿಂದಮುರ್ಚಿದ ಫಣಾಮಣಿ ಮಂಗಳ ರಶ್ಮಿಯೋ ಕರಂ
ಮೇಳಿಸಿದಪ್ಪುದೆನ್ನೆರ್ದೆಯನೆಂದು ಬೊದಿಲ್ಲನೆ ಪಾಯ್ದು ನೀರೊಳಾ
ಬಾಳನನಾದಮಾದರದೆ ಕೊಂಡೊಸೆದಂ ನಿಧಿಗಂಡನಂತೆವೋಲ್. ॥96॥

ವ॥ ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡಾಕೆ ರಾಗಿಸಿ ಸುತನ ಸೂತಕಮಂ ಕೊಂಡಾಡೆ-

**ಕಂ॥ ಅಗುಟ್ದರಲಾ ಕುಱಿಯೊಳ್ ತೊ**
**ಟ್ಟಗೆ ನಿಧಿಗಂಡಂತೆ ವಸುಧೆಗಸದಳಮಾಯ್ತಾ**
**ಮಗನಂದಮೆಂದು ಲೋಗರ್**
**ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್. ॥97॥**



# ೫. ಕರ್ಣನ ಬೆಳವಣಿಗೆ

## ಪಾತ್ರಗಳು

**ಕರ್ಣ:** ಸೂರ್ಯದೇವ ಮತ್ತು ಕುಂತಿಯ ಮಗ. ಈಗ ಸೂತ ಮತ್ತು ರಾಧೆ ದಂಪತಿಗಳ ಸಾಕು ಮಗ.

**ಇಂದ್ರ:** ದೇವಲೋಕದಲ್ಲಿನ ದೇವತೆಗಳ ಒಡೆಯ.

**ವಟು:** ಇಂದ್ರನು ವಟುವಿನ ರೂಪದಲ್ಲಿ ಬಂದು ಕರ್ಣನ ಕವಚ ಕುಂಡಲಗಳನ್ನು ಬೇಡಿ ಪಡೆಯುತ್ತಾನೆ.

**ಪರಶುರಾಮ:** ಒಬ್ಬ ರಿಸಿ. ಜಮದಗ್ನಿ ಮತ್ತು ರೇಣುಕಾದೇವಿಯ ಮಗ.

**ಸೂತ:** ಕರ್ಣನ ಸಾಕು ತಂದೆ.

**ರಾಧೆ:** ಕರ್ಣನ ಸಾಕು ತಾಯಿ

## ಕರ್ಣನ ಬೆಳವಣಿಗೆ

ನವಯೌವನ ಆರಂಭದೊಳ್ ಆತನ್ ಶಸ್ತ್ರಶಾಸ್ತ್ರವಿದ್ಯೆಯೊಳ್ ಅತಿ ಪರಿಣತನಾಗಿ, ಬಿಲ್ಲ ಜೇವೊಡೆಯೆ ಮೀಱುವ ವೈರಿ ನರೇಂದ್ರರನ್ ಪೊಡೆದುದು. ಬುಧ ಮಾಗಧ ವಂದಿಜನಕ್ಕೆ ನಿರಂತರಮ್ ಕಡಿಕಡಿದು ಇತ್ತ ಪೊನ್ನ ಕೊಟ್ಟ ಕೋಡು, ಸಿಡಿಲ್ವೊಡೆದವೊಲ್ ಅಟ್ಟಿ ಮುಟ್ಟಿ ಆದ ಎಡರನ್ ಕಡಿದು ಇಕ್ಕಿದುದು. ಎಡರದೆ ಬೇಡಿಮ್ ಓಡಿಮ್. ಇದು ಕರ್ಣನಾ ಚಾಗದ ಬೀರದ ಮಾತು. ಅಂತು ಭುವನ ಭವನಕ್ಕೆಲ್ಲಮ್ ನೆಗಟ್ದಿ ಕರ್ಣನ ಪೊಗೞ್ತೆಯಮ್ ನೆಗೞ್ತೆಯುಮನ್ ಇಂದ್ರನ್ ಕೇಳ್ದು..

ಇಂದ್ರ: (ತನ್ನಲ್ಲಿಯೇ)

**ತನ್ನಂಶದೊಳ್ ಪುಟ್ಟುವ ಅರ್ಜುನಂಗವ್ ಆತಂಗವ್ ಮುಂದೆ ದ್ವಂದ್ವಯುದ್ಧಮ್ ಉಂಟು.**

(ಎಂಬುದಮ್ ತನ್ನ ದಿವ್ಯ ಜ್ಞಾನದಿಂದಮ್ ಅಱಿದು)

**ಬೇಡಿದೊಡೆ ಕರ್ಣನ್ ಬಲದ ಬರಿಯುಮನ್ ಉಗಿದು ಈಡಾಡುಗುಮ್. ಇಂತಲ್ಲದೆ ಈತನನ್ ಗೆಲಲ್ ಬಾರದು.**

(ಎಂದು ಆಗಳೆ ಕೈಗೂಡಿದ ವಟುವಾಕೃತಿಯೊಳೆ ಆ ಸಹಜ ಕವಚಮನ್ ಕುಂಡಳಮನ್ ಬೇಡಿದನ್.)

ಕರ್ಣ: **ಬೇಡಿದುದನ್ ಅರಿದುಕೊಳ್.**

ಇಂದ್ರ: **ಬೇಡಿದುದನ್ ಎನಗೆ ಮುಟ್ಟಲಾಗದು.**

ಕರ್ಣ: (ನೆಗಳ್ದು ಅಲ್ಲಾಡದೆ ಕವಚಮನ್ ಅರಿದು)

**ಕೊಳ್**

(ಎಂದು ಇಂದ್ರಂಗೆ ಈಡಾಡಿದನ್)

ಇಂದ್ರ: (ತನ್ನಲ್ಲಿಯೇ)

**ಎಂದುಮ್ ಪೋಗು ಎಂದನೆ... ಮಾಣ್ ಎಂದನೆ... ಪೆಱತೊಂದನ್ ಈವೆನ್**

**ಎಂದನೆ... ನೊಂದಃ ಎಂದನೆ... ಸೆರಗಿಲ್ಲದೆ ಪಿಡಿ ಎಂದನ್... ಇದೇನ್ ಕಲಿಯೊ ಚಾಗಿಯೊ ರವಿತನಯನ್.**

(ಅಂತು ತನ್ನ ಸಹಜ ಕವಚಮನ್ ನೆತ್ತರ್ ಪನ ಪನ ಪನಿಯೆ ತಿದಿಯುಗಿವಂತೆ ಉಗಿದು ಕೊಟ್ಟೊಡೆ, ಇಂದ್ರನ್ ಆತನ ಕಲಿತನಕೆ ಮೆಚ್ಚಿ.)

ಇಂದ್ರ: **ಸುರ ದನುಜ ಭುಜಗ ವಿದ್ಯಾಧರ ನರಸಂಕುಲದೊಳ್ ಆರನ್ ಆದೊಡಮ್ ಏನೋ, ಧುರದೊಳ್ ನಿಜ ವಿರೋಧಿಯನ್ ಇದು ಗರ ಮುಟ್ಟೆ ಕೊಲ್ಗುಮ್**

(ಎಂದು ಶಕ್ತಿಯನ್ ಇತ್ತನ್. ಅಂತು ಇಂದ್ರನ್ ಇತ್ತ ಶಕ್ತಿಯನ್ ಕೈಕೊಂಡು ನಿಜಭುಜ ಶಕ್ತಿಯನ್ ಪ್ರಕಟಮ್ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ ಉಗ್ರ ಪರಶು ಪಾಟಿತ ರಿಪು ವಂಶಾರಾಮನನ್ ಆ ರಾಮನನ್ ಗುರು ಶುಶ್ರೂಷೆಯೊಳ್ ಕೂರಿಸೆ, ವೈಕರ್ತನನಾ ಬಲ್ಮೆ ಇಷುವಿದ್ಯಾ ಪಾರಗನ್ ಎನಿಸಿದುದು. ಅಂತು ಧನುರ್ಧರ ಅಗ್ರಗಣ್ಯನಾಗಿ ಇರ್ದ ಒಂದು ದಿವಸಮ್ ತನ್ನ ತೊಡೆಯ ಮೇಲೆ ತಲೆಯನ್ ಇಟ್ಟು ಪರಶುರಾಮನ್ ಮಱಿದು ಒಱಗಿದ ಆ ಪಸ್ತಾವದೊಳ್ ಆ ಮುನಿಗೆ ಮುನಿಸನ್ ಮಾಡಲೆಂದು ಇಂದ್ರನು ಉಪಾಯದೊಳ್ ಅಟ್ಟಿದ ವಜ್ರಕೀಟಂಗಳ್ ಕರ್ಣನ ಎರಡುಮ್ ತೊಡೆಯುಮನ್ ಉಳಿಯನ್ ಊಱಿ ಕೊಡಂತಿಯೊಳ್ ಬೆಟ್ಟಿದಂತೆ ಅತ್ತಮ್ ಇತ್ತಮ್ ಉರ್ಚಿ ಪೋಗೆಯುಮ್, ಗುರುಗೆ ನಿದ್ರಾಭಿಘಾತಮ್ ಅಕ್ಕುಮ್ ಎಂದು ಅದನ್ ಅಱಿಯದಂತೆ ತಲೆಯನ್ ಉಗುರಿಸುತ್ತುಮ್ ಇರೆಯಿರೆ, ಅತಿ ವಿಶದ ವಿಶಾಲ ಊರುಕ್ಷತದಿಂದ ಒಱಿದು ಅನಿತು ಜಡೆಯುಮನ್ ನಾಂದಿ ಆ ವಂದ ಉತ್ಥಿತಮ್ ಅಸ್ರಮಿಶ್ರ ಗಂಧಮ್ ಮನಃಕ್ಷತದೊಡನೆ ಮುನಿಯನ್ ಎಚ್ಚಱಿಸಿದುದು.. ಅಂತು ಎಚ್ಚತ್ತು ನೆತ್ತರ ಪೊನಲೊಳ್ ನಾಂದು, ನನೆದ ಮೆಯ್ಯುಮನ್ ತೊಯ್ದು ತಳ್ಪೊಯ್ದ ಜಡೆಯುಮನ್ ಕಂಡು..)

ಪರಶುರಾಮ: **ಈ ಧೈರ್ಯಮ್ ಕ್ಷತ್ರಿಯಂಗಲ್ಲದೆ ಆಗದು. ಪಾರ್ವನ್ ಎಂದು ಎನ್ನೊಳ್ ಪುಸಿದು ವಿದ್ದೆಯನ್ ಕೈಕೊಂಡುದರ್ಕೆ ದಂಡಮ್ ಪೆರತಿಲ್ಲ. ನಿನಗೆ ಆನ್ ಇತ್ತ ಬ್ರಹ್ಮಾಸ್ತ್ರಮ್ ಎಂಬ ದಿವ್ಯಾಸ್ತ್ರಮ್ ಅವಸಾನಕಾಲದೊಳ್ ಬೆಸಕೆಯ್ಯದೆ ಇರ್ಕೆ.**

(ಎಂದು ಶಾಪಮನ್ ಇತ್ತನ್. ಅಂತು ಕರ್ಣನುಮ್ ಶಾಪಹತನಾಗಿ ಮಗುಳ್ದು ಬಂದು ಸೂತನ ಮನೆಯೊಳ್ ಇರ್ಪನ್ನೆಗಮ್..)

✦

## ಕರ್ಣನ ಬೆಳವಣಿಗೆ
## ಪದ ವಿಂಗಡಣೆ ಮತ್ತು ತಿರುಳು

ನವ=ಹೊಸದಾದ; ಯೌವನ=ಹರೆಯ; ಆರಂಭ+ಒಳ್; ಆರಂಭ=ಮೊದಲು; ಆತನ್=ಕರ್ಣನು; ಶಸ್ತ್ರ=ಬಿಲ್ಲು ಬಾಣ, ಕತ್ತಿ ಗುರಾಣಿ, ಗದೆ ಮೊದಲಾದ ಹತಾರಗಳು; ಶಾಸ್ತ್ರ=ಜನರು ತಮ್ಮ ನಿತ್ಯ ಜೀವನದಲ್ಲಿ ಜಾತಿ ಮತದ ಕಟ್ಟಲೆಗಳನ್ನು ಅನುಸರಿಸುವಾಗ, ದೇವರನ್ನು ಪೂಜಿಸುವಾಗ ಮತ್ತು ಬಹುಬಗೆಯ ಕಸುಬುಗಳನ್ನು ಮಾಡುವಾಗ ಆಚರಿಸಬೇಕಾದ ಸಂಪ್ರದಾಯಗಳು: ವಿದ್ಯೆ+ಒಳ್; ವಿದ್ಯೆ=ಅರಿವು; ಒಳ್+ಅಲ್ಲಿ; ಪರಿಣತನ್+ಆಗಿ; ಪರಿಣತ=ನಿಪುಣ/ನುರಿತವನು;

**ನವಯೌವನ ಆರಂಭದೊಳ್ ಆತನ್ ಶಸ್ತ್ರಶಾಸ್ತ್ರವಿದ್ಯೆಯೊಳ್ ಅತಿ ಪರಿಣತನಾಗಿ**= ಕರ್ಣನು ಹರೆಯಕ್ಕೆ ಕಾಲಿಡುತ್ತಿದ್ದಂತೆಯೇ ಶಸ್ತ್ರವಿದ್ಯೆ ಮತ್ತು ಶಾಸ್ತ್ರವಿದ್ಯೆಯನ್ನು ಚೆನ್ನಾಗಿ ಕರಗತಮಾಡಿಕೊಂಡು ನಿಪುಣನಾಗಿ;

ಜೇ+ಪೊಡೆ; ಜೇ=ಬಿಲ್ಲಿನ ಹೆದೆ/ಬಿಲ್ಲಿಗೆ ಕಟ್ಟಿರುವ ಹುರಿ; ಪೊಡೆ=ಬಾಣವನ್ನು ಬಿಡು; ಬಿಲ್ಲ ಜೇವೊಡೆ=ಬಿಲ್ಲಿನ ಹೆದೆಗೆ ಬಾಣವನ್ನು ಹೂಡಿ ಹುರಿಯನ್ನು ಹಿಂದಕ್ಕೆ ಎಳೆದು ಬಾಣವನ್ನು ಬಿಟ್ಟಾಗ ಕೇಳಿಬರುವ ದನಿ; ಮೀಱು=ಎದುರಾಗುವ; ವೈರಿ=ಹಗೆ/ ಶತ್ರು; ನರೇಂದ್ರರ್+ಅನ್; ನರೇಂದ್ರ=ರಾಜ; ಅನ್=ಅನ್ನು; ಪೊಡೆ=ಹೊಡೆ/ಅಪ್ಪಳಿಸು/ ಬಡಿ;

**ಬಿಲ್ಲ ಜೇವೊಡೆಯೆ ಮೀಱುವ ವೈರಿ ನರೇಂದ್ರರನ್ ಪೊಡೆದುದು**=ಕರ್ಣನು ಬಿಲ್ಲಿಗೆ ಬಾಣವನ್ನು ಹೂಡಿ ಬಿಟ್ಟಾಗ ಉಂಟಾದ ದನಿಯೇ ಕಾದಾಡಲೆಂದು ಎದುರು ಬಂದ ಶತ್ರು ರಾಜರನ್ನು ಬಡಿದಪ್ಪಳಿಸಿತು; ಕರ್ಣನ ಪರಾಕ್ರಮವನ್ನು ಬಣ್ಣಿಸಲು ಈ ರೀತಿ ಅತಿಶಯವಾದ ನುಡಿಯನ್ನು ಬಳಸಲಾಗಿದೆ;

ಬುಧ=ಪಂಡಿತ; ಮಾಗಧ=ಹೊಗಳುವುದನ್ನೇ ಕಸುಬನ್ನಾಗಿ ಮಾಡಿಕೊಂಡವರು; ವಂದಿ=ಕೊಂಡಾಡುವ/ಹೊಗಳುವ; ಮಾಗಧ ವಂದಿಜನ=ಗದ್ದುಗೆಯಲ್ಲಿರುವವರನ್ನು ಮತ್ತು ಸಿರಿವಂತರನ್ನು ಹೊಗಳುವುದನ್ನೇ ಕಸುಬನ್ನಾಗಿ ಮಾಡಿಕೊಂಡಿರುವ ಜನರು;

ನಿರಂತರ=ಸದಾಕಾಲ/ಯಾವಾಗಲೂ; ಕಡಿ+ಕಡಿದು; ಕಡಿ=ಕತ್ತರಿಸು; ಇತ್ತ=ಕೊಟ್ಟ; ಪೊನ್=ಹೊನ್ನು/ಚಿನ್ನ; ಕೊಟ್ಟ=ನೀಡಿದ; ಕೋಡು=ದಾನ;

**ನಿರಂತರಮ್ ಕಡಿಕಡಿದು ಇತ್ತ ಪೊನ್ನ ಕೊಟ್ಟ ಕೋಡು**=ಸದಾಕಾಲ ತೆಗೆತೆಗೆದು ದಾನವಾಗಿ ನೀಡಿದ ಚಿನ್ನ;

ಸಿಡಿಲ್+ಪೊಡೆ+ವೊಲ್; ಸಿಡಿಲು=ಮೋಡಗಳು ಒಂದಕ್ಕೊಂದು ಬಡಿದಾಗ ಉಂಟಾಗುವ ವಿದ್ಯುತ್ ಶಕ್ತಿ ಮತ್ತು ಕೇಳಿಬರುವ ದನಿ; ವೊಲ್=ಅಂತೆ/ಹಾಗೆ; ಅಟ್ಟು=ಬೆನ್ನು ಹತ್ತು/ಓಡಿಸು; ಮುಟ್ಟು=ತಲುಪು/ಸೇರು; ಆದ=ಉಂಟಾಗಿರುವ; ಎಡರು=ಅಡಚಣೆ/ಅಡ್ಡಿ; ಕಡಿದು=ಕತ್ತರಿಸಿ; ಇಕ್ಕು=ಇಡು; ಕಡಿದಿಕ್ಕಿದುದು=ಕತ್ತರಿಸಿ ಹಾಕಿತು;

**ಬುಧ ಮಾಗಧ ವಂದಿಜನಕ್ಕೆ ನಿರಂತರಮ್ ಕಡಿಕಡಿದು ಇತ್ತ ಪೊನ್ನ ಕೊಟ್ಟ ಕೋಡು ಸಿಡಿಲ್ಪೊಡೆವೊಲ್ ಅಟ್ಟಿ ಮುಟ್ಟಿ ಆದ ಎಡರನ್ ಕಡಿದು ಇಕ್ಕಿದುದು**=ಸಿಡಿಲು ಬಡಿದ ಜಾಗದಲ್ಲಿ ಏನೊಂದು ಉಳಿಯದೆ ಎಲ್ಲವೂ ಸುಟ್ಟು ಬೂದಿಯಾಗುತ್ತದೆ. ಅಂತೆಯೇ ಕರ್ಣನು ಸದಾಕಾಲ ದಾನವಾಗಿ ನೀಡಿದ ಅಪಾರವಾದ ಚಿನ್ನದ ಸಂಪತ್ತು ಪಂಡಿತರ ಮತ್ತು ತನ್ನನ್ನು ಕೊಂಡಾಡುವ ಜನಸಮುದಾಯವರ ಬಡತನವನ್ನು ಸಂಪೂರ್ಣವಾಗಿ ತೊಡೆದುಹಾಕಿತು;

ಎಡರು=ಅಡಚಣೆ/ಅಡ್ಡಿ/ಎದುರಿಸು; ಎಡರದೆ=ಯಾವುದೇ ರೀತಿಯಲ್ಲಿ ಹಿಂಜರಿಯದೆ/ಎದುರಿಸಿದೆ; ಬೇಡು=ಯಾಚಿಸು/ಕೇಳು; ಓಡು=ಪಲಾಯನ ಮಾಡು;

**ಎಡರದೆ ಬೇಡಿಮ್ ಓಡಿಮ್**=ನೀವು ಬಡವರಾಗಿದ್ದರೆ ಯಾವುದೇ ಸಂಕೋಚ ವಿಲ್ಲದೆ ಕರ್ಣನನ್ನು ಕೇಳಿ ಸಂಪತ್ತನ್ನು ಪಡೆಯಿರಿ ಇಲ್ಲವೇ ಕರ್ಣನಿಗೆ ಎದುರಾಳಿ ಯಾಗಿದ್ದರೆ ಮತ್ತೊಂದನ್ನು ಯೋಚಿಸದೆ ಪಲಾಯನ ಮಾಡಿರಿ;

ಚಾಗ=ತ್ಯಾಗ/ವ್ಯಕ್ತಿಯು ತನ್ನಲ್ಲಿರುವುದನ್ನು ಇತರರಿಗೆ ದಾನವಾಗಿ ನೀಡುವುದು; ಬೀರ=ಪರಾಕ್ರಮ/ಕಲಿತನ;

**ಇದು ಕರ್ಣನಾ ಚಾಗದ ಬೀರದ ಮಾತು**=ಕರ್ಣನ ತ್ಯಾಗ ಮತ್ತು ಕಲಿತನದ ಬಗ್ಗೆ ಜನಸಮುದಾಯದ ಮಾತು ಇದೇ ಆಗಿದೆ;

ಅಂತು=ಆ ರೀತಿ; ಭುವನ=ಜಗತ್ತು/ಪ್ರಪಂಚ; ಭವನಕ್ಕೆ+ಎಲ್ಲಮ್; ಭವನ=ಜಾಗ; ನೆಗಟ್=ಹೆಸರುವಾಸಿಯಾಗು/ಕೀರ್ತಿಯನ್ನು ಹೊಂದು; ಪೊಗಟ್ತೆ=ಹೊಗಳಿಕೆ; ನೆಗಟ್ತೆ+ಉಮ್+ಅನ್; ನೆಗಟ್ತೆ=ಕೀರ್ತಿ; ಉಮ್=ಊ; ಅನ್=ಅನ್ನು; ಇಂದ್ರ=ದೇವತೆಗಳ ಒಡೆಯ; ದೇವಲೋಕದಲ್ಲಿ ದೇವತೆಗಳು, ಭೂಲೋಕದಲ್ಲಿ ಮಾನವರು ಮತ್ತು ಪಾತಾಳ ಲೋಕದಲ್ಲಿ ಹಾವುಗಳು ನೆಲೆಸಿವೆ ಎಂಬ ಕಲ್ಪನೆಯು ಜನಮನದಲ್ಲಿದೆ;

**ಅಂತು ಭುವನ ಭವನಕ್ಕೆಲ್ಲಮ್ ನೆಗಟ್ದ ಕರ್ಣನ ಪೊಗೞ್ತೆಯುಮ್ ನೆಗೞ್ತೆಯುಮನ್ ಇಂದ್ರನ್ ಕೇಳ್ದು**=ಜಗತ್ತಿನ ಎಲ್ಲೆಡೆಯಲ್ಲಿಯೂ ಆ ರೀತಿಯಲ್ಲಿ ಹಬ್ಬಿದ ಕರ್ಣನ ನಡೆನುಡಿಯ ಬಗೆಗಿನ ಹೊಗಳಿಕೆಯನ್ನು ಮತ್ತು ಕೀರ್ತಿಯನ್ನು ಕೇಳಿದ ದೇವತೆಗಳ ಒಡೆಯನಾದ ಇಂದ್ರನು;

ತನ್ನ+ಅಂಶ+ಒಳ್; ಅಂಶ=ಪಾಲು; ಒಳ್=ಅಲ್ಲಿ; ತನ್ನಂಶದೊಳ್=ತನ್ನ ಮತ್ತು ಕುಂತಿಯ ಕೂಡುವಿಕೆಯಿಂದ; ಪುಟ್ಟು=ಹುಟ್ಟು; ದ್ವಂದ್ವಯುದ್ಧ=ಇಬ್ಬರ ನಡುವೆ ನಡೆಯುವ ಕಾಳೆಗ; ಉಂಟು=ಇದೆ; ಎಂಬುದಮ್=ಎನ್ನುವುದನ್ನು; ದಿವ್ಯ=ಉತ್ತಮವಾದುದು; ಜ್ಞಾನ+ಇಂದ+ಅವಮ್; ಜ್ಞಾನ=ಅರಿವು/ತಿಳುವಳಿಕೆ; ದಿವ್ಯಜ್ಞಾನ=ಮುಂದೆ ನಡೆಯಲಿರುವುದನ್ನು ಅರಿಯವುದು; ಅಱಿ=ತಿಳಿ;

**ತನ್ನಂಶದೊಳ್ ಪುಟ್ಟುವ ಅರ್ಜುನಂಗಮ್ ಆತಂಗಮ್ ಮುಂದೆ ದ್ವಂದ್ವಯುದ್ಧಮ್ ಉಂಟು ಎಂಬುದಮ್ ತನ್ನ ದಿವ್ಯ ಜ್ಞಾನದಿಂದಮ್ ಅಱಿದು**=ತನ್ನ ಮತ್ತು ಕುಂತಿಯ ಕೂಡುವಿಕೆಯಿಂದ ಹುಟ್ಟುವ ಅರ್ಜುನನಿಗೂ ಕರ್ಣನಿಗೂ ಮುಂದೆ ಕಾಳೆಗವು ನಡೆಯುತ್ತದೆ ಎಂಬುದನ್ನು ತನ್ನ ದಿವ್ಯನೋಟದಿಂದ ಅರಿತುಕೊಂಡು;

ಬೇಡಿದೊಡೆ=ಕೇಳಿಕೊಂಡರೆ/ಯಾಚಿಸಿದರೆ; ಬರಿ+ಉಮ್+ಅನ್; ಬರಿ= ಹೊಟ್ಟೆಯ ಇಬ್ಬದಿಯಲ್ಲಿಯೂ ಇರುವ ಮೂಳೆ/ಪಕ್ಕೆಲುಬು; ಉಗಿ=ಸೀಳಿ; ಈಡಾಡು= ಕಿತ್ತು ಬಿಸಾಡು;

**ಬೇಡಿದೊಡೆ ಕರ್ಣನ್ ಬಲದ ಬರಿಯುಮನ್ ಉಗಿದು ಈಡಾಡುಗುಮ್**= ಬೇಡಿಕೊಂಡರೆ ಕರ್ಣನು ತನ್ನ ಬಲದ ಪಕ್ಕೆಲುಬನ್ನೇ ಸೀಳಿ ಕೊಡುವನು;

ಇಂತು+ಅಲ್ಲದೆ; ಇಂತು=ಹೀಗೆ; ಅಲ್ಲದೆ=ಹೊರತು ಪಡಿಸಿ; ಈತನನ್=ಈ ಕರ್ಣನನ್ನು; ಗೆಲಲ್=ಗೆಲ್ಲುವುದಕ್ಕೆ; ಬಾರದು=ಆಗುವುದಿಲ್ಲ;

**ಇಂತಲ್ಲದೆ ಈತನನ್ ಗೆಲಲ್ ಬಾರದು ಎಂದು**=ಕರ್ಣನನ್ನು ಕಾಪಾಡಲೆಂದೇ ಹುಟ್ಟಿನಿಂದ ಅವನ ದೇಹದ ಜತೆಗೂಡಿ ಬಂದಿರುವ ಕವಚವನ್ನು ನಾನು ಈಗ ಬೇಡಿ ಪಡೆಯದಿದ್ದರೆ, ಅರ್ಜುನನು ಕರ್ಣನನ್ನು ಮುಂದೆ ಬರಲಿರುವ ಕಾಳೆಗದಲ್ಲಿ ಗೆಲ್ಲಲಾಗುವುದಿಲ್ಲ ಎಂದುಕೊಂಡು;

ಆಗಳೆ=ಆ ಗಳಿಗೆಯಲ್ಲಿಯೇ; ಕೈಗೂಡು=ಅನುಕೂಲವಾಗು; ವಟು+ಆಕೃತಿಯೊಳೆ; ವಟು=ಗುರುವಿನ ಬಳಿ ವಿದ್ಯೆಯನ್ನು ಕಲಿಯಲು ಬಂದಿರುವ ತರುಣ; ಆಕೃತಿ=ರೂಪ/ ವೇಶ; ಸಹಜ=ಹುಟ್ಟಿನಿಂದ ಬಂದ; ಕವಚಮ್+ಅನ್; ಕವಚ=ದೇಹವನ್ನು ಕಾಪಾಡಲು ತೊಡುವ ಲೋಹದ ಅಂಗಿ; ಕುಂಡಳಮ್+ಅನ್; ಕುಂಡಳ=ಕಿವಿಯ ಓಲೆ; ಬೇಡಿದನ್=ಯಾಚಿಸಿದನು;

**ಆಗಳೆ ಕೈಗೂಡಿದ ವಟುವಾಕೃತಿಯೊಳೆ ಆ ಸಹಜ ಕವಚಮನ್ ಕುಂಡಳಮನ್ ಬೇಡಿದನ್**=ಮರುಗಳಿಗೆಯಲ್ಲಿಯೇ ದೇವೇಂದ್ರನು ತನ್ನ ಉದ್ದೇಶವನ್ನು ಈಡೇರಿಸಿ ಕೊಳ್ಳುವುದಕ್ಕಾಗಿ ಅನುಕೂಲಕರವಾದ ವಟುವಿನ ರೂಪವನ್ನು ತಳೆದು, ಕರ್ಣನ ಬಳಿಗೆ ಬಂದು ಕವಚ ಕುಂಡಲಗಳನ್ನು ದಾನವಾಗಿ ಕೊಡುವಂತೆ ಬೇಡಿದನು;

ಅರಿ=ಕತ್ತರಿಸು;

**ಬೇಡಿದುದನ್ ಅರಿದುಕೊಳ್**=ಬೇಡಿದ್ದನ್ನು ನೀನೇ ಕತ್ತರಿಸಿ ತೆಗೆದುಕೊ;

ಎನಗೆ=ನನಗೆ; ಮುಟ್ಟಲ್+ಆಗದು; ಮುಟ್ಟು=ಪಡೆ/ಹೊಂದು;

**ಬೇಡಿದುದನ್ ಎನಗೆ ಮುಟ್ಟಲಾಗದು**=ನಾನು ಬೇಡಿದ್ದನ್ನು ನಾನೇ ಕತ್ತರಿಸಿ ತೆಗೆದುಕೊಳ್ಳಬಾರದು. ನೀನೇ ಅದನ್ನು ದಾನವಾಗಿ ನನಗೆ ನೀಡಬೇಕು;

ನೆಗಟ್=ತೊಡಗು; ಅಲ್ಲಾಡು=ಅಲುಗಾಡು/ನಡುಗು/ಬೆದರು/ಬೆಚ್ಚು; ಅರಿದು=ಕತ್ತರಿಸಿ;

**ನೆಗುಟ್ದು ಅಲ್ಲಾಡದೆ ಕವಚಮನ್ ಅರಿದು**=ವಟು ಕೇಳಿದ್ದನ್ನು ಕರ್ಣನು ಕೊಡಲು ತೊಡಗಿ, ತುಸುವಾದರೂ ಬೆದರದೆ ಬೆಚ್ಚದೆ ಕವಚವನ್ನು ಸೀಳಿ ತೆಗೆದು;

**ಕೊಳ್**=ತೆಗೆದುಕೊ;

**ಕೊಳ್ ಎಂದು ಇಂದ್ರಂಗೆ ಈಡಾಡಿದನ್** =ತೆಗೆದಿಕೊ ಎಂದು ಇಂದ್ರನಿಗೆ ನೀಡಿದನು;

ಎಂದುವ್=ಎಂದಾದರೂ/ಯಾವತ್ತಾದರೂ; ಪೋಗು=ಹೋಗು; ಎಂದನೆ=ಎಂದು ಹೇಳಿದನೆ. ಅಂದರೆ ಹೇಳಲಿಲ್ಲ;

**ಎಂದುಮ್ ಪೋಗು ಎಂದನೆ**=ತನ್ನ ಬಳಿ ಬೇಡಿಬಂದವರನ್ನು ಯಾವತ್ತಾದರೂ ಬರಿಗಯ್ಯಲ್ಲಿ ಹೋಗಿ ಎಂದನೆ;

ಮಾಣ್=ನುಣುಚಿಕೊಳ್ಳು/ಜಾರಿಕೊಳ್ಳು;

**ಮಾಣ್ ಎಂದನೆ**=ದಾನವನ್ನು ಕೊಡದೆ ಸಬೂಬನ್ನು ಹೇಳಿ ನುಣುಚಿಕೊಂಡನೆ;

ಪೆಱತು=ಮತ್ತೊಂದು/ಬೇರೆಯದು; ಈ=ಕೊಡು; ಈವೆನ್=ಕೊಡುವೆನು;

**ಪೆಱತೊಂದನ್ ಈವೆನ್ ಎಂದನೆ**=ಯಾಚಕರು ಕೇಳಿದ್ದನ್ನು ಕೊಡದೆ, ಮತ್ತೊಂದನ್ನು ಕೊಡುವುದಾಗಿ ಹೇಳಿದನೆ;

ನೊಂದು+ಅಃ; ನೊಂದು=ಸಂಕಟದಿಂದ ಬೇಯುತ್ತ; ಅಃ=ಅಯ್ಯೋ ಅಯ್ಯೋ ಎನ್ನುತ್ತ ನರಳುವುದು;

**ನೊಂದಃ ಎಂದನೆ**=ದೇಹದ ತೊಗಲಿನೊಡನೆ ಸೇರಿಕೊಂಡಿದ್ದ ಕವಚವನ್ನು ಸೀಳಿ ಕಿತ್ತು ತೆಗೆಯುವಾಗ ಉಂಟಾದ ಯಾತನೆಯಿಂದ ನೊಂದು ನರಳಿದನೆ;

ಸೆರಗು+ಇಲ್ಲದೆ; ಸೆರಗು=ಅಪಾಯದ ಶಂಕೆ/ಏನಾಗುವುದೋ ಎಂಬ ಹೆದರಿಕೆ; ಪಿಡಿ=ತೆಗೆದುಕೊಳ್ಳುವುದು/ಹಿಡಿಯುವುದು;

**ಸೆರಗಿಲ್ಲದೆ ಪಿಡಿ ಎಂದನ್**=ಯಾವುದೇ ಬಗೆಯ ಅಂಜಿಕೆಯಾಗಲಿ ಇಲ್ಲವೇ ಅಳಲು ಇಲ್ಲದೆ "ತೆಗೆದುಕೊ" ಎಂದು ನುಡಿದು ಕವಚ ಕುಂಡಲಗಳನ್ನು ವಟುವಿಗೆ ನೀಡಿದನು;

ಇದು+ಏನ್; ಇದೇನ್=ಇಂತಹ ನಡೆನುಡಿಯು ಯಾವ ಬಗೆಯದು ಎಂಬ ಅಚ್ಚರಿಯನ್ನು ಸೂಚಿಸುವಾಗ ಹೇಳುವ ಪದ; ಕಲಿ=ಶೂರ; ಚಾಗಿ=ದಾನಿ/ತ್ಯಾಗಿ; ರವಿ=ಸೂರ್ಯ; ತನಯ=ಮಗ; ರವಿತನಯ=ರವಿಯ ಮಗನಾದ ಕರ್ಣ;

**ಇದೇನ್ ಕಲಿಯೊ ಚಾಗಿಯೊ ರವಿತನಯನ್**=ಸೂರ್ಯಪುತ್ರನಾದ ಕರ್ಣನು ಎಂತಹ ಕಲಿಯಾಗಿದ್ದಾನೆ... ತ್ಯಾಗಿಯಾಗಿದ್ದಾನೆ;

ನೆತ್ತರ್=ರಕ್ತ; ಪನಿ=ಹನಿ ಹನಿಯಾಗಿ ಬೀಳು/ತೊಟ್ಟಿಕ್ಕು;

**ಪನ ಪನ ಪನಿಯೆ**=ಹನಿ ಹನಿಯಾಗಿ ತೊಟ್ಟಿಕ್ಕುತ್ತಿರಲು; ತಿದಿ+ಉಗಿ+ಅಂತೆ; ತಿದಿ=ತೊಗಲು/ಚರ್ಮ; ಉಗಿ=ಸೀಳು; ತಿದಿಯುಗಿವಂತೆ=ತೊಗಲನ್ನು ಸುಲಿಯುವ ಹಾಗೆ; ಉಗಿದು=ಸೀಳಿ; ಕೊಟ್ಟೊಡೆ=ಕೊಡಲು;

**ಅಂತು ತನ್ನ ಸಹಜ ಕವಚಮನ್ ನೆತ್ತರ್ ಪನ ಪನ ಪನಿಯೆ ತಿದಿಯುಗಿವಂತೆ ಉಗಿದು ಕೊಟ್ಟೊಡೆ**=ಆ ಬಗೆಯಲ್ಲಿ ಕರ್ಣನು ತನ್ನ ಮಯ್ಯಿಗೆ ಹುಟ್ಟಿನಿಂದಲೇ ಜತೆಯಾಗಿದ್ದ ಕವಚವನ್ನು ದೇಹದ ಚರ್ಮವನ್ನು ಸುಲಿಯುವಂತೆ ಸುಲಿದು, ನೆತ್ತರು ಹನಿಹನಿಯಾಗಿ ತೊಟ್ಟಿಕ್ಕುತ್ತಿದ್ದರೂ ಲೆಕ್ಕಿಸದೆ ಇಂದ್ರನಿಗೆ ನೀಡಲು;

ಕಲಿತನ=ಪರಾಕ್ರಮ/ಶೂರತನ; ಮೆಚ್ಚು=ಒಲಿ/ಕೊಂಡಾಡು/ಪ್ರಸನ್ನನಾಗು;

**ಇಂದ್ರನ್ ಆತನ ಕಲಿತನಕೆ ಮೆಚ್ಚಿ**=ಕರ್ಣನ ಕಲಿತನವನ್ನು ಕಂಡು ಮೆಚ್ಚಿಕೊಂಡ ಇಂದ್ರನು;

ಸುರ=ದೇವತೆ; ದನುಜ=ರಕ್ಕಸ; ಭುಜಗ=ಹಾವು/ನಾಗ; ವಿದ್ಯಾಧರ=ದೇವತೆಗಳಲ್ಲಿ ಒಂದು ವರ್ಗಕ್ಕೆ ಸೇರಿದವನು; ನರ=ಮಾನವ; ಸಂಕುಲ+ಒಳ್; ಸಂಕುಲ=ಸಮೂಹ/ಗುಂಪು; ಆರನ್=ಯಾರನ್ನು; ಆದೊಡಮ್=ಆದರೂ; ಏನೋ=ಯಾವುದೋ;

ಆರನ್ ಆದೊಡಮ್

ಮಾನವರ ಗುಂಪಿನಲ್ಲಿ

ಅನ್; ವಿರೋಧಿ=ಹಗೆ/

ಒಂದು ನುಡಿಗಟ್ಟಾಗಿ

ಎನ್ನುವುದಕ್ಕೆ ಕೇಡಾಗಲಿ

ಹೆಸರು/ಕತ್ತಿ. ಇಂದ್ರನ

**ಕೊಲ್ಲುಗಮ್** ಎಂದು

ಗುರಿಮಾಡಿ ಯಾವ

ಎಂದು ಹೇಳಿ ಶಕ್ತಿಯೆಂಬ

ಯಲ್ಲಿ ಇಂದ್ರನು ಕೊಟ್ಟ

ಸುವು/ಬಲ; ಪ್ರಕಟ=

... ತೋಳ್ಬಲ ಎಂತಹುದು ಎಂಬುದನ್ನು ಜಗತ್ತಿಗೆ ತೋರಿಸಲು ಇನ್ನೂ ಹೆಚ್ಚಿನ ವಿದ್ಯೆಯನ್ನು ಕಲಿಯಬೇಕೆಂದು;

ರೇಣುಕಾ+ನಂದನನ+ಅಲ್ಲಿಗೆ; ರೇಣುಕೆ=ಜಮದಗ್ನಿ ಎಂಬ ರಿಸಿಯ ಹೆಂಡತಿ; ನಂದನ=ಮಗ; ರೇಣುಕಾನಂದನ=ಪರಶುರಾಮ; ಪೋಗಿ=ಹೋಗಿ;

**ರೇಣುಕಾನಂದನನಲ್ಲಿಗೆ ಪೋಗಿ**=ಪರಶುರಾಮನ ಬಳಿಗೆ ಹೋಗಿ; ರಾಮನ್+ಅನ್; ಉಗ್ರ=ಪ್ರಚಂಡ/ಶಕ್ತಿಯಿಂದ ಕೂಡಿದ; ಪರಶು=ಕೊಡಲಿ; ಪಾಟಿತ=ಸೀಳಿದ; ರಿಪು=ಶತ್ರು/ಹಗೆ; ವಂಶ+ಆರಾಮನ್+ಅನ್; ಆರಾಮ=ತೋಟ;

**ಉಗ್ರ ಪರಶು ಪಾಟಿತ ರಿಪು ವಂಶಾರಾಮನನ್ ಆ ರಾಮನನ್**=ತನ್ನ ಪ್ರಚಂಡವಾದ ಕೊಡಲಿಯಿಂದ ಹಗೆಗಳ ವಂಶವೆಂಬ ತೋಟವನ್ನೇ ಸೀಳಿ ಸವರಿದ ಕಡುಗಲಿಯಾದ ಆ ಪರಶುರಾಮನನ್ನು; ಪರಶುರಾಮನು ಇಪ್ಪತ್ತೊಂದು ಬಾರಿ ನಾಡೆಲ್ಲವನ್ನೂ ಸುತ್ತಿ ರಾಜವಂಶದವರನ್ನೆಲ್ಲಾ ತನ್ನ ಕೊಡಲಿಯಿಂದ ಕತ್ತರಿಸಿ ಹಾಕಿದನು ಎಂಬ ಪುರಾಣದ ಕತೆಯು ಜನಮನದಲ್ಲಿದೆ;

ಗುರು=ತನ್ನ ಬಳಿ ಬಂದ ವ್ಯಕ್ತಿಗಳಿಗೆ ವಿದ್ಯೆಯನ್ನು ನೀಡಿ, ಒಳ್ಳೆಯ ನಡೆನುಡಿಗಳನ್ನು ಕಲಿಸುವವನು; ಶುಶ್ರೂಷೆ+ಒಳ್; ಶುಶ್ರೂಷೆ=ಉಪಚಾರ/ಸೇವೆ; ಒಳ್=ಅಲ್ಲಿ; ಕೂರ್=ಒಪ್ಪು/ಮೆಚ್ಚು; ಕೂರಿಸೆ=ಮೆಚ್ಚಿಸಲು;

**ಗುರು ಶುಶ್ರೂಷೆಯೊಳ್ ಕೂರಿಸೆ**=ಗುರುವಿನ ಮೆಚ್ಚುಗೆಗೆ ಪಾತ್ರನಾಗುವಂತೆ ಸೇವೆಯನ್ನು ಮಾಡಲು;

ವಿಕರ್ತನ=ಸೂರ್ಯ; ವೈಕರ್ತನ=ಸೂರ್ಯನ ಮಗ ಕರ್ಣ; ಬಲ್ಮೆ=ಬಲ/ಶಕ್ತಿ/ಹಿರಿಮೆ; ಇಷು=ಬಾಣ; ಇಷುವಿದ್ಯೆ=ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗಿಸುವ ವಿದ್ಯೆ; ಪಾರಗ=ನಿಪುಣ; ಎನಿಸು=ಎನ್ನುವ ಹಾಗೆ ಮಾಡು;

**ವೈಕರ್ತನನಾ ಬಲ್ಮೆ ಇಷುವಿದ್ಯಾ ಪಾರಗನ್ ಎನಿಸಿದುದು**=ಕರ್ಣನ ಬಿಲ್ಲು ವಿದ್ಯೆಯ ಹಿರಿಮೆಯು ಅವನಿಗೆ ಬಿಲ್ಲು ವಿದ್ಯೆಯಲ್ಲಿ ಅಪಾರವಾದ ನಿಪುಣತೆಯನ್ನು ಪಡೆದವನು ಎಂಬ ಹೆಸರನ್ನು ತಂದಿತು;

ಅಂತು=ಹಾಗೆ; ಧನುರ್ಧರ=ಬಿಲ್ಲನ್ನು ಹಿಡಿದಿರುವವನು; ಅಗ್ರ+ಗಣ್ಯನ್+ಆಗಿ; ಅಗ್ರ=ಮೊದಲಿನ/ಮುಂಚೂಣಿಯ; ಗಣ್ಯ=ಗಣನೀಯ/ಮಾನ್ಯ; ಅಗ್ರಗಣ್ಯನ್=ದೊಡ್ಡ ವ್ಯಕ್ತಿ; ಇರ್ದ=ಇರುವಾಗ;

**ಅಂತು ಧನುರ್ಧರ ಅಗ್ರಗಣ್ಯನಾಗಿ ಇರ್ದ**=ಬಿಲ್ಲಿನ ವಿದ್ಯೆಯಲ್ಲಿ ದೊಡ್ಡ ಪರಿಣತನಾಗಿ ಇರುವಾಗ;

ಮಱೆದು=ಎಚ್ಚರವಿಲ್ಲದೆ/ನಿದ್ರೆಯನ್ನು ಮಾಡುತ್ತ; ಒಱಗು=ಮಲಗು; ಪ್ರಸ್ತಾವ+ಒಳ್; ಪ್ರಸ್ತಾವ=ಸಮಯ;

**ಒಂದು ದಿವಸಮ್ ತನ್ನ ತೊಡೆಯ ಮೇಲೆ ತಲೆಯನ್ ಇಟ್ಟು ಪರಶುರಾಮನ್ ಮಱೆದು ಒಱಗಿದ ಆ ಪಸ್ತಾವದೊಳ್**= ಒಂದು ದಿನ ಕರ್ಣನ ತೊಡೆಯ ಮೇಲೆ ತಲೆಯನ್ನಿಟ್ಟು ಪರಶುರಾಮನು ನಿದ್ರಿಸುತ್ತಿರುವ ಸಮಯದಲ್ಲಿ;

ಮುನಿ=ರಿಸಿ; ಮುನಿಸು=ಕೋಪ/ಸಿಟ್ಟು; ಮಾಡಲ್+ಎಂದು;

**ಆ ಮುನಿಗೆ ಮುನಿಸನ್ ಮಾಡಲೆಂದು**=ಪರಶುರಾಮನಿಗೆ ಕರ್ಣನ ಬಗ್ಗೆ ಕೋಪ ಬರುವಂತೆ ಮಾಡಲೆಂಬ ಉದ್ದೇಶದಿಂದ;

ಉಪಾಯ+ಒಳ್; ಉಪಾಯ=ಯುಕ್ತಿ/ಕುತಂತ್ರ; ಅಟ್ಟು=ಕಳುಹಿಸು; ವಜ್ರ=ದೊಡ್ಡದಾದ/ಬಲವಾದ; ಕೀಟ=ಹುಳು/ದುಂಬಿ/ತುಂಬಿ; ವಜ್ರಕೀಟ=ಯಾವುದನ್ನಾದರೂ ಆಳವಾಗಿ ಕೊರೆದು ತುಂಡು ಮಾಡುವ ಶಕ್ತಿಯಿರುವ ದೊಡ್ಡ ದುಂಬಿ;

**ಇಂದ್ರನು ಉಪಾಯದೊಳ್ ಅಟ್ಟಿದ ವಜ್ರಕೀಟಂಗಳ್**=ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳುವುದಕ್ಕಾಗಿ ಇಂದ್ರನು ಕಳುಹಿಸಿದ ದೊಡ್ಡ ಗಾತ್ರದ ದುಂಬಿಗಳು;

**ಕರ್ಣನ ಎರಡುಮ್ ತೊಡೆಯುಮನ್**=ಕರ್ಣನ ಎರಡು ತೊಡೆಗಳನ್ನು;

ಉಳಿ=ಕಬ್ಬಿಣದ ಲೋಹದಿಂದ ಮಾಡಿರುವ ಚೂಪಾದ ಮೊನೆಯುಳ್ಳ ಒಂದು ಉಪಕರಣ. ಕಲ್ಲಿನ ಮೇಲೆ ಇದನ್ನು ಇಟ್ಟು ಸುತ್ತಿಗೆಯಿಂದ ಹೊಡೆಯತೊಡಗಿದರೆ, ಕಲ್ಲಿನಲ್ಲಿಯೂ ಗುಳಿಯುಂಟಾಗುತ್ತದೆ; ಊಱಿ=ನೇರವಾಗಿ ನಿಲ್ಲಿಸಿ ಬಿಗಿಯಾಗಿ ಹಿಡಿದುಕೊಂಡು; ಕೊಡಂತಿ+ಒಳ್; ಕೊಡಂತಿ=ಸುತ್ತಿಗೆ; ಬೆಟ್ಟು+ಅಂತೆ; ಬೆಟ್ಟು=ಹೊಡೆ/ಬಡಿ/ಕಡಿ/ಕತ್ತರಿಸು; ಬೆಟ್ಟಿದಂತೆ=ಕೊರೆದು ಕತ್ತರಿಸುವಂತೆ; ಅತ್ತಮ್=ಆ ಕಡೆ; ಇತ್ತಮ್=ಈ ಕಡೆ; ಉರ್ಚು=ಚುಚ್ಚು/ತಿವಿ/ಸೀಳುಕೊಂಡು ಬರುವುದು; ಪೋಗೆ+ಉಮ್; ಪೋಗು=ಹೋಗು; ಪೋಗೆಯುಮ್=ಹೋಗಲು;

**ಉಳಿಯನ್ ಊಱಿ ಕೊಡಂತಿಯೊಳ್ ಬೆಟ್ಟಿದಂತೆ ಅತ್ತಮ್ ಇತ್ತಮ್ ಉರ್ಚಿ ಪೋಗೆಯುಮ್**=ಉಳಿಯನ್ನು ಬಿಗಿಯಾಗಿ ಊರಿ ಸುತ್ತಿಗೆಯಿಂದ ಹೊಡೆದು ಗುಳಿ ಮಾಡಿ ಕತ್ತರಿಸುವಂತೆ ತೊಡೆಯ ಎರಡು ಕಡೆಗಳಲ್ಲೂ ಕೊರೆಕೊರೆದು ದುಂಬಿಗಳು ಸೀಳಿಕೊಂಡು ಹೋಗಲು;

ನಿದ್ರಾ+ಅಭಿಘಾತಮ್; ಅಭಿಘಾತ=ಹಾನಿ/ಗಾಸಿ; ಅಕ್ಕುಮ್=ಆಗುವುದು; ಅದನ್=ಅದನ್ನು; ಅಱಿಯದ+ಅಂತೆ; ಅಱಿ=ತಿಳಿ; ಉಗುರಿಸು=ಉಗುರಿನಿಂದ ಕೆರೆಯುವುದು; ಇರೆ+ಇರೆ;

**ಗುರುಗೆ ನಿದ್ರಾಭಿಘಾತಮ್ ಅಕ್ಕುಮ್ ಎಂದು ಅದನ್ ಅಱಿಯದಂತೆ ತಲೆಯನ್ ಉಗುರಿಸುತ್ತುಮ್ ಇರೆಯಿರೆ**=ತನ್ನ ತೊಡೆಗಳನ್ನು ಕೊರೆಯುತ್ತಿರುವ ದುಂಬಿಗಳ ಮೊರೆತದಿಂದ ಗುರುವಿನ ನಿದ್ರೆಗೆ ಹಾನಿಯು ಉಂಟಾಗುತ್ತಿರುವುದನ್ನು ಕರ್ಣನು ಅರಿತು, ಅದನ್ನು ಗುರುಗಳು ತಿಳಿಯದಂತಿರಲಿ ಎಂದು ಗುರುವಿನ ತಲೆಯನ್ನು ತನ್ನ ಕಯ್ಯುಗುರಿಂದ ಮೆಲ್ಲನೆ ನೇವರಿಸುತ್ತ, ತನ್ನ ನೋವನ್ನು ತಾನೇ ತಿನ್ನುತ್ತಿರಲು;

ಅತಿ=ಬಹಳ ಹೆಚ್ಚಾದ; ವಿಶದ=ನಿಚ್ಚಳವಾಗಿ ಕಂಡುಬರುತ್ತಿರುವ; ವಿಶಾಲ=ದೊಡ್ಡದು; ಊರು=ತೊಡೆ; ಕ್ಷತ=ಗಾಯ; ಒಱ್=ಜಿನುಗು;

**ಅತಿ ವಿಶದ ವಿಶಾಲ ಊರುಕ್ಷತದಿಂದ ಒಱ್ಸಿದು**=ದೊಡ್ಡ ರೀತಿಯಲ್ಲಿ ಉಂಟಾದ ತೊಡೆಯ ಗಾಯದಿಂದ ಜಿನುಗುತ್ತಿರುವ ರಕ್ತವು;

ಅನಿತು=ಅಷ್ಟು; ಜಡೆ+ಉಮ್+ಅನ್; ಜಡೆಯುಮನ್=ಜಡೆಯನ್ನು; ನಾಂದಿ=ಒದ್ದೆಗೊಳಿಸಿ/ನೆನೆಯುವಂತೆ ಮಾಡಿ;

**ಅನಿತು ಜಡೆಯುಮನ್ ನಾಂದಿ**=ಮುನಿಯ ಜಡೆಯನ್ನೆಲ್ಲಾ ಒದ್ದೆಮಾಡಿ;

ಆ ವಂದ=ಆ ರೀತಿ ಹೊರಬಂದ; ಉತ್ಥಿತ=ಹೆಚ್ಚಾಗುತ್ತಿರುವ; ಅಸ್ರ=ರಕ್ತ; ಮಿಶ್ರ=ಕೂಡಿದ; ಗಂಧ=ವಾಸನೆ;

**ಆ ವಂದ ಉತ್ಥಿತಮ್ ಅಸ್ರಮಿಶ್ರ ಗಂಧಮ್**= ಆ ರೀತಿಯಲ್ಲಿ ಹೆಚ್ಚಾಗಿ ಹರಿದುಬರುತ್ತಿರುವ ರಕ್ತದಿಂದ ಕೂಡಿದ ವಾಸನೆಯು;

ಮನಃಕ್ಷತ+ಒಡನೆ; ಮನಃಕ್ಷತ=ಮನಸ್ಸಿಗೆ ಉಂಟಾದ ಗಾಸಿ; ಒಡನೆ=ಕೂಡಲೇ; ಎಟ್ಚಿಱಿಸು=ಎಚ್ಚರಗೊಳಿಸು;

**ಮುನಿಯನ್ ಮನಃಕ್ಷತದೊಡನೆ ಎಟ್ಚಿಱಿಸಿದುದು**=ಮುನಿಯ ಮನಸ್ಸನ್ನು ಗಾಸಿಗೊಳಿಸಿ ಎಚ್ಚರಗೊಳ್ಳುವಂತೆ ಮಾಡಿತು;

ಎಟ್ಚಿತ್ತು=ಎಚ್ಚರಗೊಂಡು;

**ಅಂತು ಎಟ್ಚಿತ್ತು**=ಆ ಕಾರಣದಿಂದ ಎಚ್ಚರಗೊಂಡವನಾಗಿ;

ನೆತ್ತರು=ರಕ್ತ; ಪೊನಲ್+ಒಳ್; ಪೊನಲ್=ಪ್ರವಾಹ/ಕೋಡಿ; ನಾಂದು=ಒದ್ದೆಯಾಗು; ನನೆ=ಒದ್ದೆಯಾಗು; ಮೆಯ್ಯುಮ್+ಅನ್; ತೊಯ್=ಒದ್ದೆಯಾಗುವುದು; ತಳ್ಪು+ಒಯ್ದು; ತಳ್ಪು=ಒಂದಕ್ಕೊಂದು ಕೂಡಿಕೊಂಡಿರುವುದು; ತಳ್ಪೊಯ್ದ=ಒಂದಕ್ಕೊಂದು ಅಂಟಿಕೊಂಡಿರುವ;

**ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮನ್ ತೊಯ್ದು ತಳ್ಪೊಯ್ದ ಜಡೆಯುಮನ್ ಕಂಡು**=ಕರ್ಣನ ತೊಡೆಗಳಿಂದ ಹರಿಯುತ್ತಿದ್ದ ನೆತ್ತರಿನ ಕೋಡಿಯಲ್ಲಿ ಒದ್ದೆಯಾಗಿರುವ ತನ್ನ ಮಯ್ಯನ್ನು ಮತ್ತು ಒದ್ದೆಗೊಂಡು ಒಂದಕ್ಕೊಂದು ಅಂಟಿಕೊಂಡು ಮುದ್ದೆಯಾಗಿರುವ ತನ್ನ ಜಡೆಯನ್ನು ಕಂಡು;

ಈ=ಇಂತಹ; ಧೈರ್ಯ=ಎದೆಗಾರಿಕೆ/ಕೆಚ್ಚು; ಕ್ಷತ್ರಿಯಂಗೆ+ಅಲ್ಲದೆ; ಅಲ್ಲದೆ=ಹೊರತು ಪಡಿಸಿ;

**ಈ ಧೈರ್ಯಮ್ ಕ್ಷತ್ರಿಯಂಗಲ್ಲದೆ ಆಗದು**=ಮಯ್ಯಿಂದ ನೆತ್ತರು ಒಂದೇ ಸಮನೆ ಹರಿಯುತ್ತಿದ್ದರೂ ಅದಕ್ಕಾಗಿ ಅಂಜದೆ ಅಳುಕದೆ ಎಲ್ಲ ಬಗೆಯ ನೋವನ್ನು ತಡೆದುಕೊಳ್ಳುವ ಎದೆಗಾರಿಕೆಯು ಕ್ಷತ್ರಿಯ ಕುಲದಲ್ಲಿ ಹುಟ್ಟಿದವನಿಗಲ್ಲದೆ ಬೇರೆಯವರಲ್ಲಿ ಇರುವುದಿಲ್ಲ;

ಪಾರ್ವ=ಬ್ರಾಹ್ಮಣ; ಎನ್ನ+ಒಳ್; ಎನ್ನ=ನನ್ನ; ಪುಸಿ=ಸುಳ್ಳು; ವಿದ್ದೆ+ಅನ್; ವಿದ್ದೆ=ವಿದ್ಯೆ; ಕೈಕೊಂಡುದರ್ಕೆ=ಪಡೆದುಕೊಂಡಿರುವುದಕ್ಕಾಗಿ; ದಂಡ=ಯಾತನೆ ಇಲ್ಲವೇ ನೋವಿಗೆ ಗುರಿಪಡಿಸುವುದು; ಪೆಱತು+ಇಲ್ಲ; ಪೆಱತು=ಮತ್ತೊಂದು/ಬೇರೆಯದು;

**ಪಾರ್ವನ್ ಎಂದು ಎನ್ನೊಳ್ ಪುಸಿದು ವಿದ್ದೆಯನ್ ಕೈಕೊಂಡುದರ್ಕೆ ದಂಡಮ್ ಪೆಱತಿಲ್ಲ**=ಬ್ರಾಹ್ಮಣನೆಂದು ನನ್ನೊಡನೆ ನೀನು ಸುಳ್ಳನ್ನು ಹೇಳಿ ನನ್ನಿಂದ ವಿದ್ಯೆಯನ್ನು ಕಲಿತುಕೊಂಡಿರುವುದಕ್ಕೆ ನಿನಗೆ ಮತ್ತಾವ ಬಗೆಯ ದಂಡನೆಯನ್ನು ನಾನು ನೀಡುವುದಿಲ್ಲ;

ಆನ್=ನಾನು; ಇತ್ತ=ಹೇಳಿಕೊಟ್ಟಿರುವ/ನೀಡಿರುವ; ಎಂಬ=ಎನ್ನುವ; ದಿವ್ಯ+ಅಸ್ತ್ರಮ್; ದಿವ್ಯ=ಬಹು ದೊಡ್ಡದಾದ/ಉತ್ತಮವಾದ; ಅಸ್ತ್ರ=ಆಯುಧ/ಹತಾರ; ಅವಸಾನ+ಕಾಲ+ಒಳ್; ಅವಸಾನ=ಸಾವು/ಮರಣ; ಅವಸಾನಕಾಲದೊಳ್=ಸಾವಿನ ಕೊನೆಗಳಿಗೆಯಲ್ಲಿ/ನಿನ್ನ ಜೀವಕ್ಕೆ ಬಹು ದೊಡ್ಡ ಗಂಡಾಂತರವು ಬಂದೊದಗಿದ ಸಮಯದಲ್ಲಿ; ಬೆಸ=ಕೆಲಸ/ಆದೇಶ/ಅಪ್ಪಣೆ; ಕೆಯ್=ಮಾಡು; ಬೆಸಕೆಯ್=ಹೇಳಿದ ಕೆಲಸವನ್ನು ಮಾಡುವುದು; ಬೆಸಕೆಯ್ಯದೆ=ನಿನ್ನ ಆದೇಶವನ್ನು ಪಾಲಿಸದೆ; ಇರ್ಕೆ=ಇರಲಿ;

**ನಿನಗೆ ಆನ್ ಇತ್ತ ಬ್ರಹ್ಮಾಸ್ತ್ರಮ್ ಎಂಬ ದಿವ್ಯಾಸ್ತ್ರಮ್ ಅವಸಾನಕಾಲದೊಳ್ ಬೆಸಕೆಯ್ಯದೆ ಇರ್ಕೆ**=ನಾನು ನಿನಗೆ ನೀಡಿರುವ ದಿವ್ಯವಾದ ಬ್ರಹ್ಮಾಸ್ತ್ರವು ನಿನ್ನ ಸಾವಿನ ಸಮಯದಲ್ಲಿ ನಿನ್ನ ಆದೇಶವನ್ನು ಪಾಲಿಸದಿರಲಿ;

ಶಾಪ=ವ್ಯಕ್ತಿಗೆ ಕೇಡಾಗಲೆಂದು ಬಯಸುವ ನುಡಿಗಳು;

**ಎಂದು ಶಾಪಮನ್ ಇತ್ತನ್**=ಎಂದು ಪರಶುರಾಮನು ಕರ್ಣನಿಗೆ ಶಾಪವನ್ನು ನೀಡಿದನು;

ಹತ=ಬಡಿದ/ಹೊಡೆದ/ನಾಶವಾದ; ಶಾಪಹತ=ಶಾಪಕ್ಕೆ ಗುರಿಯಾಗಿ/ಶಾಪ ತಟ್ಟಿದವನಾಗಿ; ಮಗುಟ್=ಹಿಂತಿರುಗು; ಇರ್ಪ+ಅನ್ನೆಗಮ್; ಇರ್ಪ=ಇರುವ; ಅನ್ನೆಗಮ್=ವರೆಗೆ;

**ಅಂತು ಕರ್ಣನುಮ್ ಶಾಪಹತನಾಗಿ ಮಗುಟ್ದು ಬಂದು ಸೂತನ ಮನೆಯೊಳ್ ಇರ್ಪನ್ನೆಗಮ್**= ಆ ರೀತಿಯಲ್ಲಿ ಪರಶುರಾಮನಿಂದ ಶಾಪಕ್ಕೆ ಗುರಿಯಾದ ಕರ್ಣನು ಅಲ್ಲಿಂದ ಹಿಂತಿರುಗಿ ಬಂದು ತನ್ನ ಸಾಕು ತಂದೆಯಾದ ಸೂತನ ಮನೆಯಲ್ಲಿರುವಾಗ...

✦

## ಕರ್ಣನ ಬೆಳವಣಿಗೆ
## ಪಂಪ ಭಾರತ ಪಠ್ಯ–ಪ್ರಥಮಾಶ್ವಾಸ

ಆತಂ ಶಸ್ತ್ರಶಾಸ್ತ್ರವಿದ್ಯೆಯೊಳತಿಪರಿಣತನಾಗಿ ನವಯೌವನಾರಂಭದೊಳ್–

**ಚಂ॥ ಪೊಡೆದುದು ಬಿಲ್ಲ ಜೇವೊಡೆಯೆ ಮೀಱುವ ವೈರಿ ನರೇಂದ್ರರಂ ಸಿಡಿ**
**ಲ್ವೊಡೆದವೊಲಟ್ಟೆ ಮುಟ್ಟೆ ಕಡಿದಿಕ್ಕಿದುದಾದೆಡರಂ ನಿರಂತರಂ**
**ಕಡಿಕಡಿದಿತ್ತ ಪೊನ್ನ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋ**
**ಡೆಡರದೆ ಬೇಡಿಮೋಡಿಮಿದು ಚಾಗದ ಬೀರದ ಮಾತು ಕರ್ಣನಾ ॥99॥**

ವ॥ ಅಂತು ಭುವನಭವನಕ್ಕೆಲ್ಲಂ ನೆಗಟ್ದ ಕರ್ಣನ ಪೊಗೞ್ತೆಯಂ ನೆಗೞ್ತೆಯುಮನಿಂದ್ರಂ ಕೇಳ್ದು ಮುಂದೆ ತನ್ನಂಶದೊಳ್ ಪುಟ್ಟುವರ್ಜುನಂಗಮಾತಂಗಂ ದ್ವಂದ್ವಯುದ್ಧಮುಂಟೆಂಬುದಂ ತನ್ನ ದಿವ್ಯಜ್ಞಾನದಿಂದಮಱಿದುವಿಂತಲ್ಲದೀತನನಾತಂ ಗೆಲಲ್ ಬಾರದೆಂದು–

**ಕಂ॥ ಬೇಡಿದೊಡೆ ಬಲದ ಬರಿಯುಮ**
**ನೀಡಾಡುಗುಮುಗಿದು ಕರ್ಣನೆಂದಾಗಳೆ ಕೈ**
**ಗೂಡಿದ ವಟುವಾಕೃತಿಯೊಳೆ**
**ಬೇಡಿದನಾ ಸಹಜಕವಚಮಂ ಕುಂಡಳಮಂ ॥100॥**

**ಬೇಡಿದುದನರಿದುಕೊಳ್ಳೆನೆ**
**ಬೇಡಿದುದಂ ಮುಟ್ಟಲಾಗದೆನಗೆನೆ ನೆಗಟ್ದ**
**ಲ್ಲಾಡದೆ ಕೊಳ್ಳೆಂದರಿದೀ**
**ಡಾಡಿದನಿಂದ್ರಂಗೆ ಕವಚಮಂ ರಾಧೇಯಂ ॥101॥**

**ಎಂದುಂ ಪೋಗೆಂದನೆ ಮಾ**
**ಣೆಂದನೆ ಪೆಱತೊಂದನೀವೆನೆಂದನೆ ನೊಂದಃ**
**ಎಂದನೆ ಸೆರಗಿಲ್ಲದೆ ಪಿಡಿ**
**ಯೆಂದನಿದೇಂ ಕಲಿಯೊ ಚಾಗಿಯೋ ರವಿತನಯಂ ॥102॥**

ವ॥ ಅಂತು ತನ್ನ ಸಹಜಕವಚಮಮಂ ನೆತ್ತರ್ ಪನ ಪನ ಪನಿಯೆ ತಿದಿಯುಗಿವಂತುಗಿದು ಕೊಟ್ಟೊಡಿಂದ್ರನಾತನ ಕಲಿತನಕೆ ಮೆಚ್ಚಿ–

**ಕಂ॥ ಸುರ ದನುಜ ಭುಜಗ ವಿದ್ಯಾ**
**ಧರ ನರಸಂಕುಲದೊಳಾರನಾದೊಡಮೇನೋ**
**ಗರ ಮುಟ್ಟೆ ಕೊಲ್ಗುಮಿದು ನಿಜ**
**ವಿರೋಧಿಯಂ ಧುರದೊಳೆಂದು ಶಕ್ತಿಯನಿತ್ತಂ ॥103॥**

ವ॥ ಅಂತಿಂದ್ರನಿತ್ತ ಶಕ್ತಿಯಂ ಕೈಕೊಂಡು ನಿಜಭುಜಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ–

**ಕಂ॥ ಕೂರಿಸೆ ಗುರು ಶುಶ್ರೂಷೆಯೊ**
**ಳಾ ರಾಮನನುಗ್ರ ಪರಶು ಪಾಟಿತ ರಿಪು ವಂ**
**ಶಾರಾಮನನಿಷುವಿದ್ಯಾ**
**ಪಾರಗನೆನಿಸಿದುದು ಬಲ್ಮೆ ವೈಕರ್ತನನಾ ॥104॥**

ವ॥ ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱಿದೊಱಗಿದಾ ಪ್ರಸ್ತಾವದೊಳಾ ಮುನಿಗೆ ಮುನಿಸಂ ಮಾಡಲೆಂದಿಂದ್ರನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚಿ ಪೋಗೆಯುಮದನಱಿಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ–

**ಕಂ॥ ಅತಿ ವಿಶದ ವಿಶಾಲೋರು**
**ಕ್ಷತದಿಂದೊಱಿದನಿತು ಜಡೆಯುಮಂ ನಾಂದಿ ಮನಃ**
**ಕ್ಷತದೊಡನೆಚ್ಚಱಿಸಿದುದು**
**ಕ್ಷಿತಮಾ ವಂದಸ್ರ ಮಿಶ್ರ ಗಂಧಂ ಮುನಿಯಂ ॥105॥**

ವ॥ ಅಂತೆಚ್ಚತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡೀ ಧೈರ್ಯಂ ಕ್ಷತ್ರಿಯಂಗಲ್ಲದಾಗದು ಪಾರ್ವನೆಂದೆನ್ನೊಳ್ ಪುಸಿದು ವಿದ್ದೆಯಂ ಕೈಕೊಂಡುದರ್ಕೆ ದಂಡಂ ಪೆಱತಿಲ್ಲ ನಿನಗಾನಿತ್ತ ಬ್ರಹ್ಮಾಸ್ತ್ರಮೆಂಬ ದಿವ್ಯಾಸ್ತ್ರಮವಸಾನಕಾಲದೊಳ್ ಬೆಸಕೆಯ್ಯದಿರ್ಕೆಂದು ಶಾಪಮನಿತ್ತನಂತು ಕರ್ಣನುಂ ಶಾಪಹತನಾಗಿ ಮಗುಟ್ದು ಬಂದು ಸೂತನ ಮನೆಯೊಳಿರ್ಪನ್ನೆಗಮ್;

# ೬. ಶಾಪಕ್ಕೆ ಗುರಿಯಾದ ಪಾಂಡುರಾಜ

## ಪಾತ್ರಗಳು

**ಧೃತರಾಷ್ಟ್ರ:** ಕುರುವಂಶದ ಹಿರಿಯ ಮಗ. ಅಂಬಿಕೆ ಮತ್ತು ವ್ಯಾಸ ರಿಸಿಯ ಮಗ.

**ಪಾಂಡು:** ಕುರುವಂಶದ ಎರಡನೆಯ ಮಗ. ಅಂಬಾಲೆ ಮತ್ತು ವ್ಯಾಸ ರಿಸಿಯ ಮಗ

**ವಿದುರ:** ಅಂಬಿಕೆಯ ದಾಸಿ ಮತ್ತು ವ್ಯಾಸ ರಿಸಿಯ ಮಗ.

**ಕುಂತಿ:** ಪಾಂಡುರಾಜನ ಮೊದಲನೆಯ ಹೆಂಡತಿ.

**ಮಾದ್ರಿ:** ಪಾಂಡುರಾಜನ ಎರಡನೆಯ ಹೆಂಡತಿ.

**ಕಿಂದಮ:** ಕಾಡಿನಲ್ಲಿ ನೆಲೆಸಿದ್ದ ಒಬ್ಬ ಮುನಿ. ಪಾಂಡುರಾಜನಿಗೆ ಶಾಪವನ್ನು ನೀಡಿದವನು.

**ಗಾಂಗೇಯ:** ಗಂಗಾದೇವಿ ಮತ್ತು ಶಂತನು ರಾಜನ ಮಗ.

# ಶಾಪಕ್ಕೆ ಗುರಿಯಾದ ಪಾಂಡುರಾಜ

ಕಲ್ಪಲತೆಗಳ್ ಎರಡಱ ನಡುವಣ ಕಲ್ಪವೃಕ್ಷಮ್ ಇರ್ಪಂತೆ ಆಕೆಗಳ್ ಇರ್ವರುಮ್ ಎರಡುಮ್ ಕೆಲದೊಳಿರೆ ಇರ್ದ ಪಾಂಡುರಾಜಂಗೆ ಧೃತರಾಷ್ಟ್ರನ್ ಅಂಗಹೀನನ್ ಎಂದು ವಿವಾಹದ ಒಸಗೆಯೊಡನೆ ಪಟ್ಟಬಂಧದ ಒಸಗೆಯಮ್ ಮಾಡಿ ನೆಲನನ್ ಆಳಿಸೆ; ಗಂಡರ ನೆತ್ತಿಯೊಳ್ ಬಾಳನ್ ಇನ್ನು ಒತ್ತಿ ಊಱುಗುಮ್ ಎಂದೊಡೆ ಮೀಱುವೆವು ಎಂಬ ಮಾಂಡಳಿಕರ್, ಈಯದರ್ ಎಂಬ ಅದಟರ್, ವಯಲ್ಗೆ ಮೆಯ್ಯೋಱುವೆವು ಎಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಜೆ, ಪಾಂಡರಾಜನಾ ತೇಜದ ದಳ್ಳುರಿ ಏನ್ ಪಿರಿದೊ ನಭಕ್ಕೆ ಪಾಱಿದುದು.

ಸಮುದ್ರಮುದ್ರಿತ ಧರಾಚಕ್ರಮ್ ಬೆಸಕೆಯ್ದತ್ತು ; ಪ್ರತಾಪಕ್ಕೆ ಅಗುರ್ವಿಸೆ ದಿಶಾಚಕ್ರಮ್ ಗೋಳುಂಡೆಗೊಳುತ್ತುಮ್ ಇರ್ದುದು. ಪೊದಟ್ಟಿ ಆಜ್ಞೆಗಮ್ ಪೆಸರ್ಗಮ್ ವಿಯಚ್ಚಕ್ರಮ್ ಮುನ್ನಮೆ ರೂಪುವೋದುದು. ಆ ಜಸಮ್ ಸಮಂತು ಎಂಬಿನಮ್ ಪಾಂಡುರಮ್ ಆದುದು. ಆ ನೃಪರೊಳ್ ಆರ್ ಆ ಪಾಂಡುರಾಜಂಬರಮ್; ಅಂತು ಪಾಂಡುರಾಜನ್ ಅಧಿಕ ತೇಜನುಮ್, ಅವನತ ವೈರಿ ಭೂಭೃತ್ ಸಮಾಜನುಮ್ ಆಗಿ ನೆಗೞುತ್ತ ಇರ್ದು,

ಒಂದು ದಿವಸಮ್ ಅಟ್ಟೆಯಿಮ್ ತೋಪಿನ ಬೇಂಟೆಯನ್ ಆಡಲ್ ಪೋಗಿ... ದಿವ್ಯಮುನಿಯುಮ್ ಮನೋಜಸುಖಕ್ಕೆ ಸೋಲ್ತು ನೆರೆಯಲ್ಕೆ ಇನಿಯಳನ್ ಅಟ್ಟೆಯಿಂದೆ ಮೃಗಿ ಮಾಡಿ ಅಲಂಪಿನೆ ಮೃಗಮ್ ಆಗಿ ಮರಳ್ದು ಕೂಡೆ...ಮೆಲ್ಲನೆ ಮೃಗಮ್ ಎಂದು ಸಾರ್ದು... ನೆಱನಮ್ ನೋಡಿ ನರೇಂದ್ರನ್ ಮೃಗಚಾರಿಯಮ್ ಭೋಂಕನೆ ಎಚ್ಚು ಮಾಣದೆ ಒಂದು ಮಾರಿಯನ್ ತನಗೆ ತಂದನ್. ಆಗಳ್ ಪ್ರಳಯದ ಉಳ್ಕುಮ್ ಉಳ್ಕುವಂತೆ ತನ್ನ ಎಚ್ಚ ಅಂಬು ಮುನಿಕುಮಾರನ ಕಣ್ಣೊಳಮ್ ಎರ್ದೆಯೊಳಮ್ ಉಕ್ಕೆ...

**ಕಿಂದಮ ಮುನಿ: ಪೇಳಿಮ್ ಎನ್ನನ್ ಆವನ್ ಎಚ್ಚನ್?**

(ಎಂಬ ಮುನಿಯ ಮುನಿದ ಸರಮನ್ ಕೇಳ್ದು ಬಿಲ್ಲನ್ ಅಂಬುಮನ್ ಈಡಾಡಿ ತನ್ನ ಮುಂದೆ ನಿಂದಿರ್ದ ಭೂಪನಮ್ ಮುನಿ ನೋಡಿ...)

**ಕಿಂದಮ ಮುನಿ:** **ಸನ್ನತದಿಮ್ ರತಕ್ಕೆ ಎಳಸಿ ನಲ್ಲಳೊಳ್ ಓತು ಒಡಗೂಡಿದ ಎನ್ನನ್ ಇಂತು ಅನ್ನಯಮ್ ಎಚ್ಚುದರ್ಕೆ ಅದು ದಂಡಮ್ ಪೆಱತಿಲ್ಲ. ನಲ್ಲಳೊಳ್ ಒಱಲ್ದು ನೀನ್ ನಡೆ ನೋಡಿಯುಮ್ ಬಯಸಿ ಕೂಡಿಯುಮ್ ಆಗಡೆ ಸಾವೆಯಾಗಿ ಪೋಗಿನ್ನು.**

(ಎನೆ ರೌದ್ರಶಾಪ ಪರಿತಾಪ ವಿಳಾಪದೊಳ್)

**ಪಾಂಡುರಾಜ:** (ತನ್ನಲ್ಲಿಯೇ)

**ಎನ್ನ ಗೆಯ್ದ ಕಾಮಾಂಕ್ರಾಂತಕ್ಕೆ ಕಾಮಕೃತಮ್ ಏನ್ ಪಿರಿದಲ್ತು. ಎತ್ತ ವನಮ್... ಎತ್ತ ಮೃಗಯಾವೃತ್ತಕಮ್; ಈ ತಪಸ್ವಿ ಎತ್ತ ... ಆನ್ ಎತ್ತ; ಮೃಗಮ್ ಎಂದು ಎಂತು ಎಚ್ಚೆನ್. ಇದೆಲ್ಲಮ್ ಅಘಟಿತಘಟಿತಮ್... ಆತ್ಮಕರ್ಮಾಯತ್ತಮ್ ಪೆಱತಲ್ತು.**

(ಎಂದು ಚಿಂತಿಸುತ್ತುಮ್ ಪೊೞಲ್ಗೆ ಮಗುಳ್ದುವಂದು, ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗೆ ತದ್ವೃತ್ತಾಂತಮ್ ಎಲ್ಲಮಮ್ ಪೇೞ್ದು, ಸಮಸ್ತವಸ್ತುಗಳಮ್ ದೀನ ಅನಾಥಜನಂಗಳ್ಗೆ ಸೂಱೆಗೊಟ್ಟು ನಿಜ ಪರಿವಾರಮಮ್ ಬರಿಸಿ...

**ಪಾಂಡುರಾಜ:** **ಅನಂಗ ಜಂಗಮಲತಾ ಲಲಿತಾಂಗಿಯರಿಂದಮ್ ಅಲ್ತೆ ಸಂಸಾರಮ್ ಎಂಬುದು ಸಾರಮ್. ಇದು ತನ್ಮುನಿ ಶಾಪದಿಂದಮ್ ಇನ್ ಎನಗೆ ತಪ್ಪುದು. ವನವಾಸದೊಳ್ ಇರ್ಪೆನ್. ಇದರ್ಕೆ ಇನ್ನಾರುಮ್ ವಕ್ರಿಸದಿರಿಮ್.**

(ಎಂದು ದುರ್ವಾರ ಪರಾಕ್ರಮನ್ ತಳರೆ, ಬಾರಿಸಿವಾರಿಸಿ ಕುಂತಿ ಮಾದ್ರಿಯರ್ ಬೆನ್ನ ಬೆನ್ನನೆ ಬರೆ, ಬಿನ್ನ ಬಿನ್ನನೆ ಪೋಗಿ, ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ ಭಂಗಮಮ್; ಮಣಿಮೌಕ್ತಿಕ ನೀಳ ಸ್ಥೂಳ ಶಿಲಾ ಪ್ರವಿಭಾಸಿತೋತ್ತುಂಗಮಮ್ ; ಮುನಿ ಮುಖ್ಯ ಮುಖಾಂಭೋಜೋದರ ನಿರ್ಗತಮಂತ್ರ ಪೂತಾಂಗಮಮ್; ಉದ್ಯಚ್ಛೃಂಗಮನ್ ಆ ಶತಶೃಂಗಮಮ್ ನೃಪನೆಯ್ದಿದನ್.)

✦

# ಶಾಪಕ್ಕೆ ಗುರಿಯಾದ ಪಾಂಡುರಾಜ
## ಪದ ವಿಂಗಡಣೆ ಮತ್ತು ತಿರುಳು

ಕಲ್ಪಲತೆ+ಗಳ್; ಲತೆ=ಬಳ್ಳಿ/ಹಂಬು; ವೃಕ್ಷ=ಮರ; ದೇವಲೋಕದ ಒಡೆಯನಾದ ದೇವೇಂದ್ರನ ಅಮರಾವತಿ ಪಟ್ಟಣದ ಉದ್ಯಾನದಲ್ಲಿ ಕಲ್ಪವೃಕ್ಷ ಎಂಬ ಮರ ಮತ್ತು ಕಲ್ಪಲತೆ ಎಂಬ ಹೆಸರಿನ ಬಳ್ಳಿಗಳಿವೆ. ಈ ಲತೆ ಮತ್ತು ಮರದ ಬಳಿ ನಿಂತು ವ್ಯಕ್ತಿಯು ತನ್ನ ಮನದಲ್ಲಿ ಕೋರಿಕೊಂಡ ಬಯಕೆಗಳೆಲ್ಲವನ್ನೂ ಇವು ಈಡೇರಿಸುತ್ತವೆ ಎಂಬ ಕಲ್ಪನೆಯು ಜನಮನದಲ್ಲಿದೆ; ಇರ್ಪ+ಅಂತೆ; ಇರ್ಪ=ಇರುವ; ಅಂತೆ=ಹಾಗೆ; ಇರ್ದ=ಕಂಡುಬರುತ್ತಿರುವ;

**ಕಲ್ಪಲತೆಗಳ್ ಎರಡಱ ನಡುವಣ ಕಲ್ಪವೃಕ್ಷಮ್ ಇರ್ಪಂತೆ ಇರ್ದ**=ಎರಡು ಕಲ್ಪಲತೆಗಳ ನಡುವೆ ಕಂಗೊಳಿಸುತ್ತಿರುವ ಕಲ್ಪವೃಕ್ಷದಂತೆ ಕಂಡುಬರುತ್ತಿರುವ;

ಆಕೆ+ಗಳ್; ಆಕೆಗಳು=ಮದುವಣಗಿತ್ತಿಯರಾದ ಕುಂತಿ ಮತ್ತು ಮಾದ್ರಿ; ಇರ್ವರ್+ಉಮ್; ಉಮ್=ಊ; ಎರಡು+ಉಮ್; ಕೆಲ+ಒಳ್+ಇರೆ; ಕೆಲ=ಪಕ್ಕ; ಇರೆ=ಇರಲು;

**ಆಕೆಗಳ್ ಇರ್ವರುಮ್ ಎರಡುಮ್ ಕೆಲದೊಳಿರೆ ಇರ್ದ ಪಾಂಡುರಾಜಂಗೆ** =ತನ್ನ ಅಕ್ಕಪಕ್ಕದಲ್ಲಿ ಮದುವಣಗಿತ್ತಿಯರಾದ ಕುಂತಿ ಮತ್ತು ಮಾದ್ರಿಯರೊಡನೆ ಕುಳಿತಿರುವ ಪಾಂಡುರಾಜನಿಗೆ;

ಅಂಗ=ದೇಹ; ಹೀನ=ಊನಗೊಂಡಿರುವುದು/ಇಲ್ಲದಿರುವುದು; ಅಂಗಹೀನ=ಕಣ್ಣು ಕಾಣದ ಕುರುಡ; ವಿವಾಹ=ಮದುವೆ/ಲಗ್ನ; ಒಸಗೆ+ಒಡನೆ; ಒಸಗೆ=ಮಂಗಳ ಕಾರ್ಯ; ಒಡನೆ=ಜತೆಯಲ್ಲಿಯೇ; ಪಟ್ಟ=ಸಿಂಹಾಸನ/ವ್ಯಕ್ತಿಯನ್ನು ರಾಜನನ್ನಾಗಿ ಮಾಡುವಾಗ ಅವನ ಹಣೆಗೆ ಕಟ್ಟುವ ಪಟ್ಟಿ; ಬಂಧ=ಕಟ್ಟು; ಪಟ್ಟಬಂಧ=ವ್ಯಕ್ತಿಯ ಹಣೆಗೆ ಗದ್ದುಗೆಯ ಸೂಚಕವಾದ ಪಟ್ಟಿಯೊಂದನ್ನು ಕಟ್ಟಿ, ತಲೆಗೆ ಕಿರೀಟವನ್ನು ತೊಡಿಸಿ, ಸಿಂಹಾಸನದಲ್ಲಿ ಕುಳ್ಳಿರಿಸುವುದು; ನೆಲನ್+ಅನ್; ನೆಲ=ನಾಡು/ರಾಜ್ಯ; ಅನ್=ಅನ್ನು; ಆಳಿಸೆ=ಆಡಳಿತವನ್ನು ನಡೆಸುವಂತೆ ಮಾಡಲು;

**ಧೃತರಾಷ್ಟ್ರನ್ ಅಂಗಹೀನನ್ ಎಂದು ವಿವಾಹದ ಒಸಗೆಯೊಡನೆ ಪಟ್ಟಬಂಧದ ಒಸಗೆಯಮ್ ಮಾಡಿ ನೆಲನನ್ ಆಳಿಸೆ**=ಕುರುವಂಶದ ಮಕ್ಕಳಲ್ಲಿ ಹಿರಿಯವನಾದ ಧೃತರಾಷ್ಟ್ರನು ಹುಟ್ಟುಗುರುಡನಾಗಿದ್ದರಿಂದ, ಕುರವಂಶದ ಎರಡನೆಯ ಮಗನಾದ ಪಾಂಡುವಿಗೆ ಕುಂತಿ ಮತ್ತು ಮಾದ್ರಿಯರೊಡನೆ ಮದುವೆಯನ್ನು ಮಾಡುವಾಗಲೇ ಗಾಂಗೇಯನು ಪಾಂಡುವಿಗೆ ರಾಜಪಟ್ಟವನ್ನು ಕಟ್ಟಿ ನಾಡನ್ನು ಆಳಿಸತೊಡಗಲು;

ಗಂಡ=ಶೂರ/ವೀರ; ನೆತ್ತಿ+ಒಳ್; ನೆತ್ತಿ=ತಲೆಯ ಮೇಲಿನ ಜಾಗ; ಒಳ್=ಅಲ್ಲಿ; ಬಾಳ್+ಅನ್; ಬಾಳ್=ಕತ್ತಿ; ಒತ್ತು=ಚುಚ್ಚು/ತಿವಿ/ಅದುಮು; ಊಱು=ನೆಡು/ಇಡು/ನಾಟಿಸು; ಊಱುಗುಮ್ ಎಂದೊಡೆ=ನೆಡುತ್ತೇನೆ ಎಂದು ಹೇಳಿದರೆ;

**ಇನ್ನು ಗಂಡರ ನೆತ್ತಿಯೊಳ್ ಬಾಳನ್ ಒತ್ತಿ ಊಱುಗುಮ್ ಎಂದೊಡೆ**= ಇನ್ನು ಮುಂದೆ ತನ್ನ ಆಡಳಿತಕ್ಕೆ ಎದುರಾಗಿ ಬರುವ ವೀರರ ನೆತ್ತಿಯಲ್ಲಿ ಕತ್ತಿಯನ್ನು ಚುಚ್ಚಿ ನೆಡಲಾಗುವುದು ಎಂದು ಪಾಂಡುರಾಜನು ಅಬ್ಬರಿಸಲು; ಇದೊಂದು ರೂಪಕವಾಗಿ ಬಳಕೆಯಾಗಿದೆ. ಅಂದರೆ ಎದುರಾಳಿಯು ಎಂತಹ ವೀರನೇ ಆಗಿರಲಿ ಅವನ ಸೊಕ್ಕನ್ನು ಅಡಗಿಸಿ ಅಡಿಯಾಳನ್ನಾಗಿ ಮಾಡಿಕೊಳ್ಳುತ್ತೇನೆ ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ಮೀಱು=ಕಡೆಗಣಿಸು/ಲೆಕ್ಕಿಸದಿರು; ಎಂಬ=ಎನ್ನುವ/ಎಂದು ಹೇಳುವ; ಮಾಂಡಳಿಕ=ರಾಜನ ಕಯ್ ಕೆಳಗೆ ರಾಜ್ಯಕ್ಕೆ ಸೇರಿದ ಒಂದು ಪ್ರಾಂತ್ಯವನ್ನು ಆಳುತ್ತಿರುವವನು;

**ಮೀಱುವೆವು ಎಂಬ ಮಾಂಡಳಿಕರ್**=ರಾಜನ ಇರುವಿಕೆಯನ್ನೇ ಲೆಕ್ಕಿಸದೆ ತಮ್ಮ ಇಚ್ಚೆಗೆ ತಕ್ಕಂತೆ ನಡೆದುಕೊಳ್ಳುತ್ತೇವೆ ಎಂದು ಎದುರುಬೀಳುವ ಮಾಂಡಲಿಕರು;

ಈ=ಕೊಡು/ನೀಡು; ಈಯದರ್=ಕೊಡುವುದಿಲ್ಲ; ಅದಟ=ಶೂರ/ಪರಾಕ್ರಮಿ/ಎದೆಗಾರ;

**ಈಯದರ್ ಎಂಬ ಅದಟರ್**=ರಾಜನಿಗೆ ಕಪ್ಪಕಾಣಿಕೆಗಳನ್ನು ನೀಡುವುದಿಲ್ಲವೆಂದು ಹೇಳುವ ಎದೆಗಾರರು;

ವಯಲ್=ರಣರಂಗ/ಕಾಳೆಗದ ನೆಲ; ಮೆಯ್+ತೋಱುವೆವು; ಮೆಯ್ದೋರು=ಹಾಜರಾಗುವುದು/ಕಾಣಿಸಿಕೊಳ್ಳುವುದು; ಪೂಣ್=ಆಣೆಯಿಕ್ಕು/ಪಣ ತೊಡು;

**ವಯಲ್ಗೆ ಮೆಯ್ದೋಱುವೆವು ಎಂಬ ಪೂಣೆಗರ್**=ರಾಜನನ್ನು ರಣರಂಗದಲ್ಲಿ ಎದುರಿಸಲು ಬರುತ್ತೇವೆಯೇ ಹೊರತು ರಾಜನಿಗೆ ಎಂದೆಂದಿಗೂ ಅಡಿಯಾಳಾಗುವುದಿಲ್ಲ ಎಂದು ಪಣ ತೊಟ್ಟಿರುವವರು;

ಅಡಂಗು=ಹಿಂದಕ್ಕೆ ಸರಿ/ಮರೆಯಾಗು; ಕುನುಂಗು=ಬಗ್ಗು/ಬಾಗು; ಸಿಡಿಲ್=ಚೆದರು/ಹರಡು; ಜೋಲು=ಕುಸಿದು ಬೀಳು/ಇಳಿ ಬೀಳು; ಕಾಯ್ಪು+ಆರೆ; ಕಾಯ್ಪು=ಮುನಿಸು/ಉದ್ವೇಗ/ಬಿಸುಪು; ಆರು=ತಣ್ಣಗಾಗು/ನಂದು;

**ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱೆ**=ರಾಜನಿಗೆ ಕಪ್ಪಕಾಣಿಕೆಗಳನ್ನು ನೀಡದೆ, ರಾಜನ ಅಪ್ಪಣೆಗಳನ್ನು ಲೆಕ್ಕಿಸದೆ ಎದುರಾಗಿ ನಡೆಯುತ್ತಿದ್ದ ಮಾಂಡಲಿಕರನ್ನು ಮತ್ತು ಇತರ ವೀರರನ್ನು ಪಾಂಡುರಾಜನು ತನ್ನ ಬಾಹುಬಲದಿಂದ ಸದೆಬಡಿಯಲು ಎದುರಾಳಿಗಳ ಸೊಕ್ಕು ಅಡಗಿ, ಅವರೆಲ್ಲರೂ ಚದುರಿಹೋಗಿ ಕುಗ್ಗಿ ಕುಸಿದು ತಣ್ಣಗಾದರು;

ತೇಜ=ಹೊಳಪು/ಕಾಂತಿ/ಶಕ್ತಿ; ದಳ್ಳುರಿ=ದೊಡ್ಡ ಪ್ರಮಾಣದ ಬೆಂಕಿ/ದಗದಗನೆ ಹತ್ತಿ ಉರಿಯುತ್ತಿರುವ ಬೆಂಕಿ; ತೇಜದ ದಳ್ಳುರಿ=ಇದೊಂದು ರೂಪಕವಾಗಿ ಬಳಕೆಯಾಗಿದೆ. ಪಾಂಡುರಾಜನ ತೋಳಿನ ಬಲ ಮತ್ತು ಹಗೆಗಳನ್ನು ಸದೆಬಡಿಯಬಲ್ಲ ಪರಾಕ್ರಮದ ಹಿರಿಮೆಯನ್ನು ಸೂಚಿಸುತ್ತದೆ; ಪಿರಿದು=ದೊಡ್ಡದು; ನಭ=ಆಕಾಶ/ಗಗನ; ಪಾಱು=ಹಾರು/ನೆಗೆ;

**ಪಾಂಡುರಾಜನಾ ತೇಜದ ದಳ್ಳುರಿ ಏನ್ ಪಿರಿದೊ ನಭಕ್ಕೆ ಪಾಱುದುದು**= ಪಾಂಡುವಿನ ಪರಾಕ್ರಮ ಬಹು ದೊಡ್ಡದು. ದಗದಗನೆ ಉರಿಯುತ್ತಿರುವ ದಳ್ಳುರಿಯು ಹೇಗೆ ಗಗನದ ಕಡೆಗೆ ಬಹು ಎತ್ತರೆತ್ತರಕ್ಕೆ ಏರುತ್ತದೆಯೋ ಅಂತೆಯೇ ಪಾಂಡುರಾಜನ ಪರಾಕ್ರಮವು ಅಚ್ಚರಿಯನ್ನು ಉಂಟುಮಾಡುವಂತೆ ದೊಡ್ಡದಾಗಿ ಎಲ್ಲೆಡೆಯಲ್ಲಿಯೂ ಹಬ್ಬಿತ್ತು;

ಸಮುದ್ರ=ಕಡಲು; ಮುದ್ರಿತ=ಸುತ್ತುಗಟ್ಟು/ಸುತ್ತುವರಿ; ಧರಾ=ಭೂಮಿ; ಚಕ್ರ=ಮಂಡಲ; ಧರಾಚಕ್ರ=ಭೂಮಂಡಲ/ರಾಜ್ಯ/ಸಾಮ್ರಾಜ್ಯ; ಬೆಸಕೆಯ್=ಹೇಳಿದ ಕೆಲಸವನ್ನು ಮಾಡು/ಅಪ್ಪಣೆಯನ್ನು ಪರಿಪಾಲಿಸು;

**ಸಮುದ್ರಮುದ್ರಿತ ಧರಾಚಕ್ರಮ್ ಬೆಸಕೆಯ್ದತ್ತು**=ಕಡಲಿನಿಂದ ಸುತ್ತುವರಿದ ರಾಜ್ಯದಲ್ಲಿ ಪಾಂಡುರಾಜನ ಅಪ್ಪಣೆಯಂತೆ ಆಡಳಿತ ನಡೆಯುತ್ತಿತ್ತು;

ಪ್ರತಾಪ=ಶಕ್ತಿ/ಪರಾಕ್ರಮ; ಅಗುರ್=ಹೆದರು; ಅಗುರ್ವಿಸೆ=ಹೆದರಿಕೊಂಡು; ದಿಶಾ=ದಿಕ್ಕು; ದಿಶಾಚಕ್ರ=ದಿಕ್ಕುಗಳಿಂದ ಕೂಡಿರುವ ಭೂಮಂಡಲ; ಗೋಳುಂಡೆ+ ಕೊಳ್+ಉತ್ತ+ಉಮ್; ಗೋಳುಂಡೆ=ಅತಿಯಾದ ಸಂಕಟ/ಮಿತಿಮೀರಿದ ಅಳಲು; ಕೊಳ್=ಹೊಂದು/ಪಡೆ; ಉಮ್=ಊ; ಇರ್ದುದು=ಇತ್ತು;

**ಪ್ರತಾಪಕ್ಕೆ ಅಗುರ್ವಿಸೆ ದಿಶಾಚಕ್ರಮ್ ಗೋಳುಂಡೆಗೊಳುತ್ತುಮ್ ಇರ್ದುದು**= ಪಾಂಡುರಾಜನ ಪ್ರತಾಪಕ್ಕೆ ಹೆದರಿ ಭೂಮಂಡಲದ ರಾಜರೆಲ್ಲರೂ ಅತಿಯಾದ ಸಂಕಟದಿಂದ ಗೋಳಿಡುತ್ತಿದ್ದರು;

ಪೊದಟ್=ಪ್ರಕಟವಾಗು; ಆಜ್ಞೆ=ಅಪ್ಪಣೆ; ಪೆಸರ್=ಹೆಸರು; ವಿಯಚ್ಚಕ್ರ=ಗಗನ ಮಂಡಲ/ಆಕಾಶ ಪ್ರದೇಶ; ಮುನ್ನಮ್=ಮೊದಲು; ರೂಪು+ಪೋದುದು; ರೂಪು=ಆಕಾರ; ಪೋದುದು=ಹೋಯಿತು; ರೂಪುವೋದುದು=ಮರೆಯಾಯಿತು

**ಪೊದಟ್ದ ಆಜ್ಞೆಗಮ್ ಪೆಸರ್ಗಮ್ ವಿಯಚ್ಚಕ್ರಮ್ ಮುನ್ನಮೆ ರೂಪುವೋದುದು** =ಪಾಂಡುರಾಜನಿಂದ ಪ್ರಕಟಗೊಂಡ ಅಪ್ಪಣೆಯಿಂದ ಮತ್ತು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ ಹೆಸರಿನಿಂದ ಗಗನ ಮಂಡಲವೇ ಮರೆಯಾಯಿತು; ಈ ಬಗೆಯ ಅತಿಶಯದ ನುಡಿಗಳ ಮೂಲಕ ಪಾಂಡುರಾಜನ ಶಕ್ತಿ ಮತ್ತು ಹೆಸರನ್ನು ಕೊಂಡಾಡಲಾಗುತ್ತಿದೆ;

ಜಸ=ಯಶಸ್ಸು/ಕೀರ್ತಿ; ಸಮಂತು=ಸೊಗಸು/ಅಂದ/ಚೆನ್ನಾಗಿ; ಎಂಬಿನಮ್= ಎನ್ನುವ ಹಾಗೆ; ಪಾಂಡುರ=ಬಿಳಿಯ ಬಣ್ಣ; ಆದುದು=ಆಯಿತು;

**ಆ ಜಸಮ್ ಸಮಂತು ಎಂಬಿನಮ್ ಪಾಂಡುರಮ್ ಆದುದು**= ಪಾಂಡುರಾಜನ ಕೀರ್ತಿಯು ಬಹಳ ಚೆನ್ನಾಗಿದೆ ಎನ್ನುವಂತೆ ಎಲ್ಲೆಡೆಯಲ್ಲಿಯೂ ಬೆಳಗತೊಡಗಿತು;

ನೃಪರ್+ಒಳ್; ನೃಪ=ರಾಜ; ಆರ್=ಯಾರು; ಪಾಂಡುರಾಜಮ್+ಬರಮ್; ಬರ=ವರೆಗೆ;

**ಆ ನೃಪರೊಳ್ ಆರ್ ಆ ಪಾಂಡುರಾಜಂಬರಮ್**=ರಾಜರ ಸಮೂಹದಲ್ಲಿ ಪಾಂಡುರಾಜನ ಪರಾಕ್ರಮ ಮತ್ತು ಕೀರ್ತಿಗೆ ಸಮಾನರಾದವರು ಯಾರೊಬ್ಬರೂ ಇಲ್ಲ. ಅಂದರೆ ಇವನ ಮಟ್ಟಕ್ಕೆ ಏರುವ ಶಕ್ತಿ ಇನ್ನಿತರ ರಾಜರಲ್ಲಿ ಇಲ್ಲ;

ಅಂತು=ಆ ರೀತಿ; ಅಧಿಕ=ಹೆಚ್ಚಿನ; ತೇಜನ್+ಉಮ್; ತೇಜ=ಶಕ್ತಿ; ತೇಜನ್=ಶಕ್ತಿವಂತ; ಉಮ್=ಊ;

**ಅಂತು ಪಾಂಡುರಾಜನ್ ಅಧಿಕ ತೇಜನುಮ್**=ಆ ರೀತಿ ಪಾಂಡುರಾಜನು ದೊಡ್ಡ ಶಕ್ತಿಶಾಲಿಯೂ;

ಅವನತ=ಬಗ್ಗಿದ; ವೈರಿ=ಹಗೆ/ಶತ್ರು; ಭೂಭೃತ್=ರಾಜ; ಸಮಾಜನ್+ಉಮ್; ಸಮಾಜ=ಗುಂಪು/ಸಮೂಹ;

**ಅವನತ ವೈರಿ ಭೂಭೃತ್ ಸಮಾಜನುಮ್ ಆಗಿ**=ಹಗೆಗಳಾಗಿದ್ದ ರಾಜರ ಸಮೂಹವು ತನಗೆ ತಲೆಬಗ್ಗಿ ನಡೆಯುವಂತೆ ಮಾಡಿ;

ನೆಗಟ್=ಹೆಸರುವಾಸಿಯಾಗು/ಕೀರ್ತಿವಂತನಾಗು; ಇರ್ದು+ಒಂದು;

**ನೆಗಟುತ್ತ ಇರ್ದು**=ಹೆಸರುವಾಸಿಯಾಗಿ ಬಾಳುತ್ತಿರಲು;

ಅಟ್ಟಿ+ಇನ್; ಅಟ್ಟಿ=ಒಲವು/ಪ್ರೀತಿ/ಆಸೆ; ಇನ್=ಇಂದ; ತೋಪು=ಮರಗಿಡಗಳಿಂದ

ಕಿಕ್ಕಿರಿದು ತುಂಬಿರುವ ಪ್ರದೇಶ; ಬೇಂಟೆ+ಅನ್; ಬೇಂಟೆ=ಪ್ರಾಣಿಗಳನ್ನು ಸೆರೆಹಿಡಿಯುವುದು ಇಲ್ಲವೇ ಕೊಲ್ಲುವುದು; ತೋಪಿನ ಬೇಂಟೆ=ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡುವಾಗ ಬೇಟೆಗಾರರು ಅನುಸರಿಸುವ ತಂತ್ರಗಳಲ್ಲಿ ಒಂದು ಬಗೆಯದು; ಅನ್=ಅನ್ನು; ಪೋಗಿ=ಹೋಗಿ;

**ಒಂದು ದಿವಸಮ್ ಅಳ್ತಿಯಿನ್ ತೋಪಿನ ಬೇಂಟೆಯನ್ ಆಡಲ್ ಪೋಗಿ**=ಒಂದು ದಿನ ಪಾಂಡುರಾಜನು ತುಂಬಾ ಆಸೆಯಿಂದ ತೋಪಿನ ಬೇಟೆಯಾಡಲೆಂದು ಕಾಡಿಗೆ ಬಂದು;

ದಿವ್ಯ+ಮುನಿ+ಉಮ್; ದಿವ್ಯ=ಉತ್ತಮವಾದುದು; ಮುನಿ=ರಿಸಿ; ಉಮ್=ಊ; ಮನೋಜ=ಹೆಣ್ಣು ಗಂಡಿನ ಮಯ್ ಮನದ ಕಾಮ, ಪ್ರಣಯ ಮತ್ತು ಪ್ರೇಮದ ಒಳಮಿಡಿತಗಳಿಗೆ ಒಬ್ಬ ದೇವತೆಯನ್ನು ಕಲ್ಪಿಸಿಕೊಳ್ಳಲಾಗಿದೆ. ಈ ದೇವತೆಯನ್ನು ಮನೋಜ/ಮದನ/ಮನ್ಮಥ/ಕಾಮದೇವ ಎಂಬ ಹೆಸರುಗಳಲ್ಲಿ ಕರೆಯುತ್ತಾರೆ; ಮನೋಜಸುಖ=ಗಂಡುಹೆಣ್ಣಿನ ದೇಹಗಳ ಕೂಡುವಿಕೆಯಿಂದ ದೊರೆಯುವ ಆನಂದ; ಸೋಲ್=ಮೋಹಗೊಳ್ಳುವುದು;

**ದಿವ್ಯಮುನಿಯುಮ್ ಮನೋಜಸುಖಕ್ಕೆ ಸೋಲ್ತು**=ಕಿಂದಮನೆಂಬ ಹೆಸರಿನ ದೊಡ್ಡ ಮುನಿಯೊಬ್ಬನು ಹೆಣ್ಣಿನ ದೇಹದೊಡನೆ ಕಾಮದ ನಂಟನ್ನು ಹೊಂದಿ ಆನಂದವನ್ನು ಪಡೆಯಬೇಕೆಂಬ ಮೋಹಕ್ಕೆ ಒಳಗಾಗಿ;

ನೆರೆ=ಕೂಡು; ನೆರೆಯಲ್ಕೆ=ಜತೆಗೂಡುವುದಕ್ಕಾಗಿ; ಇನಿಯಳ್+ಅನ್; ಇನಿಯಳ್=ಹೆಂಡತಿ; ಇನಿಯಳನ್=ತನ್ನ ಒಲವಿನ ಹೆಂಡತಿಯನ್ನು; ಅಟ್ತಿ+ಇಂದೆ; ಮೃಗಿ=ಹೆಣ್ಣು ಜಿಂಕೆ;

**ನೆರೆಯಲ್ಕೆ ಇನಿಯಳನ್ ಅಟ್ತಿಯಿಂದೆ ಮೃಗಿ ಮಾಡಿ**=ದೇಹದ ಮಿಲನಕ್ಕಾಗಿ ತನ್ನ ಒಲವಿನ ಹೆಂಡತಿಯನ್ನು ಪ್ರೀತಿಯಿಂದ ಹೆಣ್ಣು ಜಿಂಕೆಯನ್ನಾಗಿ ಮಾಡಿ;

ಅಲಂಪು=ಬಹಳವಾದ ಬಯಕೆ/ಹೆಚ್ಚಿನ ಆಸೆ; ಮೃಗ=ಜಿಂಕೆ/ಯಾವುದೇ ಒಂದು ಬಗೆಯ ಪ್ರಾಣಿ; ಮರಳ್=ಕುದಿ/ಒಳಮಿಡಿತಗಳ ಉದ್ವೇಗ/ಕಾಮದ ಬಿಸಿ; ಕೂಡು=ಸೇರು;

**ಅಲಂಪಿನೆ ಮೃಗಮ್ ಆಗಿ ಮರಳ್ದು ಕೂಡೆ**=ಅತಿ ಹೆಚ್ಚಿನ ಬಯಕೆಯಿಂದ ಕಿಂದಮ ರಿಸಿಯು ತಾನು ಗಂಡು ಜಿಂಕೆಯಾಗಿ ರೂಪುಗೊಂಡು ಕಾಮದ ಒಳಮಿಡಿತಗಳಿಂದ ಬಿಸುಪೇರಿ ತನ್ನ ಹೆಂಡತಿಯೊಡನೆ ಜತೆಗೂಡಿರಲು;

ನರೇಂದ್ರ=ರಾಜ; ಮೆಲ್ಲನೆ=ಸದ್ದು ಕೇಳಿಸದಂತೆ ಹೆಜ್ಜೆಗಳನ್ನು ಇಡುತ್ತ; ಸಾರ್=ಹತ್ತಿರಕ್ಕೆ ಬರುವುದು/ಸಮೀಪಿಸು;

**ನರೇಂದ್ರನ್ ಮೆಲ್ಲನೆ ಸಾರ್ದು ಮೃಗಮ್ ಎಂದು**= ಪಾಂಡುರಾಜನು ಮೆಲ್ಲಗೆ ಹತ್ತಿರ ಬಂದು, ಕಾಮಪರವಶರಾಗಿ ಜತೆಗೂಡಿದ್ದ ಮುನಿದಂಪತಿಯನ್ನು ಕಾಡಿನ ಪ್ರಾಣಿಯೆಂದು ತಿಳಿದು;

ನೆಱಿ=ಆಯಕಟ್ಟಿನ ಜಾಗ/ಸರಿಯಾದ ಜಾಗ;

**ನೆಱಿನಮ್ ನೋಡಿ**=ಪ್ರಾಣಿಯನ್ನು ಬೇಟೆಯಾಡಲು ಆಯಕಟ್ಟಿನ ಜಾಗಕ್ಕೆ ಗುರಿಯಿಟ್ಟು;

ಮೃಗಚಾರಿ+ಅನ್; ಮೃಗಚಾರಿ= ಜಿಂಕೆಯ ರೂಪವನ್ನು ತಳೆದು ಕಾಮಕ್ರೀಡೆಯಲ್ಲಿ ತಲ್ಲೀನನಾಗಿದ್ದ ರಿಸಿಯನ್ನು; ಭೋಂಕನೆ=ತಟ್ಟನೆ/ಕೂಡಲೇ; ಎಚ್ಚು=ಬಾಣವನ್ನು ಪ್ರಯೋಗಿಸು;

**ನೆಱಿನಮ್ ನೋಡಿ ಮೃಗಚಾರಿಯನ್ ಭೋಂಕನೆ ಎಚ್ಚು**=ಪ್ರಾಣಿಯನ್ನು ಕೊಲ್ಲಲು ಆಯಕಟ್ಟಿನ ಜಾಗ ಯಾವುದೆಂಬುದನ್ನು ಸರಿಯಾಗಿ ಗುರುತಿಸಿ ಕಾಮಕ್ರೀಡೆಯಲ್ಲಿ ತೊಡಗಿದ್ದ ಕಿಂದಮ ರಿಸಿಯ ಮೇಲೆ ತಟ್ಟನೆ ಬಾಣವನ್ನು ಬಿಟ್ಟನು;

ಮಾಣ್=ಸುಮ್ಮನಿರು; ಮಾರಿ=ಜನಪದರ ಕಲ್ಪನೆಯಲ್ಲಿ ರೂಪುಗೊಂಡಿರುವ ದೇವತೆಯೊಬ್ಬಳ ಹೆಸರು. ಈಕೆಯು ಯಾವುದೇ ಕಾರಣದಿಂದ ಕೋಪಗೊಂಡರೆ, ತನ್ನ ಕೋಪಕ್ಕೆ ಕಾರಣರಾದವರನ್ನು ಸಾವುನೋವುಗಳಿಗೆ ಗುರಿಮಾಡುತ್ತಾಳೆ ಎಂಬ ಅಂಜಿಕೆಯು ಜನಮನದಲ್ಲಿದೆ;

**ಮಾರಿಯನ್ ತನಗೆ ತಂದನ್**=ಇದೊಂದು ನುಡಿಗಟ್ಟು, ವ್ಯಕ್ತಿಯು ಮಾಡುವ ಕೆಲಸವು ಕೆಲವೊಮ್ಮೆ ಆತನ ಪಾಲಿಗೆ ಬಹುಬಗೆಯ ಸಾವು ನೋವನ್ನು ತರುತ್ತದೆ ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

**ಮಾಣದೆ ಒಂದು ಮಾರಿಯನ್ ತನಗೆ ತಂದನ್**=ಬಾಣವನ್ನು ಬಿಡುವುದಕ್ಕೆ ಮೊದಲು ಸರಿಯಾಗಿ ನೋಡದೆ ಇಲ್ಲವೇ ತಿಳಿಯದೆ ಹೊಡೆದಿದ್ದರಿಂದ ಪಾಂಡುರಾಜನು ತನ್ನ ಜೀವನಕ್ಕೆ ದೊಡ್ಡ ಗಂಡಾಂತರವನ್ನು ತಂದುಕೊಂಡನು;

ಪ್ರಳಯ=ನಿಸರ್ಗದಲ್ಲಿ ಉಂಟಾಗುವ ಏರಿಳಿತಗಳಿಂದ ಪ್ರಪಂಚದ ಬದುಕು ಕೊನೆಗೊಳ್ಳುವುದು; ಉಳ್ಕೆ=ಮುಗಿಲಿನ ಕಡೆಯಿಂದ ನೆಲದ ಕಡೆಗೆ ಬೀಳುವ ಕೆಂಡದ ಕಣಗಳಂತೆ ಹೊಳೆಯುವ ವಸ್ತು; ಉಳ್ಕುವ್=ಉಳ್ಕೆಯು; ಉಳ್ಕು+ಅಂತೆ; ಉಳ್ಕು=ವೇದನೆಯನ್ನುಂಟುಮಾಡು; ಅಂತೆ=ಹಾಗೆ/ಆ ರೀತಿ; ಎಚ್ಚ=ಬಿಟ್ಟ/ಹೊಡೆದ; ಅಂಬು=ಬಾಣ; ಕಣ್ಣ್+ಒಳ್+ಅಮ್; ಎರ್ದೆ+ಒಳ್+ ಅಮ್; ಉಕ್ಕೆ=ನೋವನ್ನುಂಟು ಮಾಡಲು;

**ಆಗಳ್ ಪ್ರಳಯದ ಉಳ್ಕುಮ್ ಉಳ್ಕುವಂತೆ ತನ್ನ ಎಚ್ಚ ಅಂಬು ಮುನಿಕುಮಾರನ ಕಣ್ಣೊಳಮ್ ಎರ್ದೆಯೊಳಮ್ ಉಕ್ಕೆ**=ಆಗ ಪ್ರಳಯಕಾಲದಲ್ಲಿ ಮುಗಿಲಿನಿಂದ ನೆಲದ ಮೇಲೆ ಉಳ್ಕೆಗಳು ಉರಿಯುತ್ತ ಬೀಳುವಂತೆ ತಾನು ಹೊಡೆದ ಬಾಣದ ಮೊನೆಯು ಕಿಂದಮ ಮುನಿಯ ಕಣ್ಣಿನಲ್ಲಿ ಮತ್ತು ಎದೆಯೊಳಕ್ಕೆ ನಾಟಿಕೊಂಡು ವೇದನೆಯನ್ನುಂಟು ಮಾಡಲು;

ಪೇಟ್=ಹೇಳು; ಎನ್ನನ್=ನನ್ನನ್ನು; ಆವನ್=ಯಾರು; ಎಚ್ಚನ್=ಹೊಡೆದವನು;

**ಪೇಟಿಮ್ ಎನ್ನನ್ ಆವನ್ ಎಚ್ಚನ್** =ಹೇಳಿರಿ.. ನನ್ನನ್ನು ಹೊಡೆದವರು ಯಾರು;

ಎಂಬ=ಎನ್ನುವ; ಮುನಿ=ಸಿಟ್ಟಾಗು/ಕೋಪಗೊಳ್ಳು; ಸರಮ್+ಅನ್; ಸರ=ದನಿ;

**ಎಂಬ ಮುನಿಯ ಮುನಿದ ಸರಮನ್ ಕೇಳ್ದು**=ಎಂದು ನುಡಿದ ಕಿಂದಮ ಮುನಿಯ ಕೋಪದ ದನಿಯನ್ನು ಕೇಳಿ;

ಅಂಬುವನ್+ಅನ್; ಅನ್=ಅನ್ನು; ಈಡಾಡು=ಬಿಸಾಡು/ದೂರ ಎಸೆ; ನಿಂದು+ಇರ್ದ; ಭೂಪನ್+ಅಮ್; ಭೂಪ=ರಾಜ;

**ಬಿಲ್ಲನ್ ಅಂಬುಮನ್ ಈಡಾಡಿ ತನ್ನ ಮುಂದೆ ನಿಂದಿರ್ದ ಭೂಪನಮ್ ಮುನಿ ನೋಡಿ**=ಕಯ್ಗಳಲ್ಲಿ ಇದ್ದ ಬಿಲ್ಲುಬಾಣಗಳನ್ನು ಬಿಸಾಡಿ, ತನ್ನ ಮುಂದೆ ನಿಂತುಕೊಂಡಿರುವ ರಾಜನನ್ನು ಕಿಂದಮ ಮುನಿಯು ನೋಡಿ;

ಸನ್ನತ+ಇಮ್; ಸನ್ನತ=ತೀವ್ರವಾದ ಕಾಮನೆಯಿಂದ; ರತ=ಗಂಡು ಹೆಣ್ಣಿನ ಮಯ್ ಮನದ ಕೂಟ; ಎಳಸು=ಬಯಸು/ಆಸೆಪಟ್ಟು; ನಲ್ಲಳ್+ಒಳ್; ಒಳ್=ಅಲ್ಲಿ; ಓತು=ಪ್ರೀತಿಸು; ಒಡಗೂಡು=ಸೇರು/ಮಿಲನ; ಎನ್ನನ್=ನನ್ನನ್ನು;

**ಸನ್ನತದಿಮ್ ರತಕ್ಕೆ ಎಳಸಿ ನಲ್ಲಳೊಳ್ ಓತು ಒಡಗೂಡಿದ ಎನ್ನನ್**= ಕಾಮದ ನಂಟನ್ನು ಹೊಂದಿ ಆನಂದಿಸಬೇಕೆಂಬ ಬಯಕೆಯಿಂದ ಹೆಂಡತಿಯೊಡನೆ ಪ್ರೀತಿಯಿಂದ ಜತೆಗೂಡಿದ್ದ ನನ್ನನ್ನು;

ಇಂತು=ಈ ರೀತಿ; ಅನ್ನಯ=ಅನ್ಯಾಯ/ನ್ಯಾಯವಲ್ಲದ ರೀತಿಯ ವರ್ತನೆ; ಎಚ್ಚುದರ್ಕೆ=ಬಾಣದಿಂದ ಹೊಡೆದಿರುವುದಕ್ಕೆ;

**ಇಂತು ಅನ್ನಯಮ್ ಎಚ್ಚುದರ್ಕೆ**=ಈ ರೀತಿ ಅನ್ಯಾಯವಾಗಿ ಬಾಣದಿಂದ ಹೊಡೆದಿರುವುದಕ್ಕೆ;

ದಂಡ=ವ್ಯಕ್ತಿಯು ಮಾಡಿದ ತಪ್ಪಿಗೆ ನೀಡುವ ಶಿಕ್ಷೆ; ಪೆಱತು+ಇಲ್ಲ; ಪೆಱತು= ಬೇರೆಯದು/ಮತ್ತೊಂದು;

**ಅದು ದಂಡಮ್ ಪೆಱತಿಲ್ಲ**=ಈಗ ನೀನು ಮಾಡಿರುವ ಅನ್ಯಾಯಕ್ಕೆ ಮತ್ತೊಂದು ಬಗೆಯ ದಂಡನೆಯನ್ನು ನಾನು ನಿನಗೆ ನೀಡುವುದಿಲ್ಲ;

ನಲ್ಲಳ್+ಒಳ್; ಒಱಿಲ್=ಮೋಹಿಸು/ಪ್ರೀತಿಸು/ಕಾಮಿಸು; ನಡೆ=ಚೆನ್ನಾಗಿ/ಬಹಳವಾಗಿ; ನೋಡಿ+ಉವ್; ಬಯಸು=ಹಂಬಲಿಸು; ಕೂಡಿ+ಉವ್; ಕೂಡು=ಕಾಮದ ಮಿಲನ; ಆಗಡೆ=ಆ ಗಳಿಗೆಯಲ್ಲಿಯೇ; ಸಾವೆ+ಆಗಿ; ಸಾವು=ಮರಣ; ಪೋಗು+ಇನ್ನು;

**ನಲ್ಲಳೊಳ್ ಒಱಿಲ್ದು ನೀನ್ ನಡೆ ನೋಡಿಯುಮ್ ಬಯಸಿ ಕೂಡಿಯುಮ್ ಆಗಡೆ ಸಾವೆಯಾಗಿ**=ನಿನ್ನ ನಲ್ಲೆಯನ್ನು ಕಾಮದ ಕಣ್ಣಿನಿಂದ ನೋಡುತ್ತ, ಅವಳ ದೇಹದೊಡನೆ ಬೆರೆತು ಆನಂದಿಸಬೇಕೆಂಬ ತುಡಿತದಿಂದ ನೀನು ಅವಳೊಡನೆ ನೀನು ಮಿಲನಗೊಳ್ಳುತ್ತಿರುವ ಗಳಿಗೆಯಲ್ಲಿಯೇ ನಿನಗೆ ಸಾವು ಬರುತ್ತದೆ;

ಪೋಗು+ಇನ್ನು; ಪೋಗು=ಹೋಗು; ಎನೆ=ಎಂದು ನುಡಿಯಲು;

**ಪೋಗಿನ್ನು ಎನೆ**=ಇನ್ನು ಇಲ್ಲಿಂದ ಹೊರಡು ಎನ್ನಲು;

ರೌದ್ರ=ಉಗ್ರವಾದುದು; ಶಾಪ=ಕೆಡುಕಾಗಲೆಂದು ಹೇಳುವ ನುಡಿ/ಸಾವುನೋವುಗಳು ಉಂಟಾಗಲೆಂದು ಹೇಳುವ ಮಾತು; ಪರಿತಾಪ=ಅತಿ ಹೆಚ್ಚಿನ ಸಂಕಟ; ವಿಳಾಪ+ಒಳ್; ವಿಳಾಪ=ಅಳುವಿಕೆ/ರೋದನ;

**ರೌದ್ರ ಶಾಪ ಪರಿತಾಪ ವಿಳಾಪದೊಳ್**=ಉಗ್ರವಾದ ಶಾಪಕ್ಕೆ ಗುರಿಯಾಗಿ ಅತಿಹೆಚ್ಚಿನ ಸಂಕಟದಿಂದ ಕಣ್ಣೀರಿಡುತ್ತಾ;

ಎನ್ನ=ನನ್ನ; ಗೆಯ್=ಮಾಡು; ಕಾಮ+ಆಕ್ರಾಂತಕ್ಕೆ; ಕಾಮ=ಗಂಡುಹೆಣ್ಣಿನ ಕೂಡುವಿಕೆ; ಆಕ್ರಾಂತ=ದಾಳಿ ಮಾಡುವುದು; ಕಾಮಾಂಕ್ರಾಂತ=ಕಾಮ ಕ್ರೀಡೆಯಲ್ಲಿದ್ದವರ ಮೇಲೆ ದಾಳಿ ಮಾಡುವುದು; ಕೃತ=ಮಾಡಿದ; ಕಾಮಕೃತ=ಕಾಮಕ್ರೀಡೆಯಲ್ಲಿದ್ದಾಗಲೇ ಸಾವು ಬರಲೆಂಬ ಶಾಪ; ಪಿರಿದು+ಅಲ್ತು; ಪಿರಿದು=ದೊಡ್ಡದು/ಹೆಚ್ಚಿನದು; ಅಲ್ತು=ಅಲ್ಲ;

**ಎನ್ನ ಗೆಯ್ದ ಕಾಮಾಕ್ರಾಂತಕ್ಕೆ ಕಾಮಕೃತಮ್ ಏನ್ ಪಿರಿದಲ್ತು**=ಕಾಮದ ತುಡಿತದಿಂದ ಒಲಿದು ಒಂದಾಗಿದ್ದವರ ಮೇಲೆ ಬಾಣವನ್ನು ಹೊಡೆದು ಅಡ್ಡಿಪಡಿಸಿದ ನನಗೆ, ಕಾಮಕೂಟದಲ್ಲಿದ್ದಾಗಲೇ ಸಾವು ಬರಲಿ ಎಂಬ ಕಿಂದಮ ಮುನಿಯ ಶಾಪದ ನುಡಿ ಏನು ದೊಡ್ಡದಲ್ಲ. ಅಂದರೆ ಇಂತಹ ಶಾಪಕ್ಕೆ ನಾನು ತಕ್ಕವನಾಗಿದ್ದೇನೆ. ನಾನು ಮಾಡಿದ ತಪ್ಪು ದೊಡ್ಡದು;

ಎತ್ತ=ಯಾವ ಕಡೆ; ವನ=ಕಾಡು; ಮೃಗಯಾ+ವೃತ್ತಕಮ್; ಮೃಗಯಾ=ಬೇಟೆ/ಶಿಕಾರಿ; ವೃತ್ತಕ=ಕೆಲಸ; ಮೃಗಯಾವೃತ್ತಕ=ಪ್ರಾಣಿಗಳನ್ನು ಬೇಟೆಯಾಡುವುದು;

**ಎತ್ತ ವನಮ್... ಎತ್ತ ಮೃಗಯಾವೃತ್ತಕಮ್**=ಎಲ್ಲೋ ಒಂದು ಕಡೆ ಇರುವ ಕಾಡಿಗೆ ಮತ್ತೊಂದು ಎಡೆಯಿಂದ ನಾನು ಬೇಟೆಯಾಡಲೆಂದು ಬಂದೆ;

ತಪಸ್ವಿ=ರಿಸಿ; ಆನ್=ನಾನು;

**ಈ ತಪಸ್ವಿ ಎತ್ತ... ಆನ್ ಎತ್ತ** =ಈ ತಪಸ್ವಿಯು ಯಾರೋ ನಾನಾರೋ. ಅಂದರೆ ಈ ಮೊದಲು ಇಬ್ಬರು ಒಬ್ಬರನ್ನೊಬ್ಬರು ಅರಿಯೆವು;

ಎಚ್ಚೆನ್=ಬಾಣವನ್ನು ಹೊಡೆದೆನು;

**ಮೃಗಮ್ ಎಂದು ಎಂತು ಎಚ್ಚೆನ್**=ಕಾಡಿನ ಪ್ರಾಣಿಯೆಂದು ತಿಳಿದು ಬಾಣದಿಂದ ಹೊಡೆದೆನು;

ಇದು+ಎಲ್ಲಮ್; ಅಘಟಿತ=ನಡೆಯದ ಸಂಗತಿ; ಘಟಿತ=ನಡೆದ ಸಂಗತಿ;

**ಇದೆಲ್ಲಮ್ ಅಘಟಿತಘಟಿತಮ್**=ಇದೆಲ್ಲವೂ ಒಂದಕ್ಕೊಂದು ಸಂಬಂಧವೇ ಇಲ್ಲದಂತಿದ್ದರೂ, ನಡೆಯಬಾರದ್ದೆಲ್ಲವೂ ನಡೆದೇಹೋಯಿತು;

ಆತ್ಮ+ಕರ್ಮ+ಆಯತ್ತಮ್; ಆತ್ಮ=ಜೀವಿ/ವ್ಯಕ್ತಿ/ತನ್ನ; ಕರ್ಮ=ಕೆಲಸ; ಆಯತ್ತ=ಕೂಡಿರುವುದು/ಒಳಗೊಂಡಿರುವುದು; ಪೆಱತು+ಅಲ್ತು; ಪೆಱತು=ಬೇರೆಯದು/ಮತ್ತೊಂದು; ಅಲ್ತು=ಅಲ್ಲ; ಆತ್ಮಕರ್ಮ=ವ್ಯಕ್ತಿಯು ಮಾಡಿದ ಒಳ್ಳೆಯ ಇಲ್ಲವೇ ಕೆಟ್ಟ ಕೆಲಸ;

**ಆತ್ಮಕರ್ಮಾಯತ್ತಮ್ ಪೆಱತಲ್ತು**=ಯಾವುದೇ ವ್ಯಕ್ತಿಯು ತಾನು ಮಾಡಿದ ಒಳ್ಳೆಯ ಕೆಲಸಕ್ಕೆ ಒಳ್ಳೆಯದನ್ನು ಇಲ್ಲವೇ ಮಾಡಿದ ಕೆಟ್ಟ ಕೆಲಸಕ್ಕೆ ಕೆಟ್ಟದ್ದನ್ನು ಹೊಂದಲೇಬೇಕು. ಈಗ ನಡೆದಿರುವುದು ಮತ್ತೇನು ಅಲ್ಲ. ಅಂದರೆ ನಾನು ಮಾಡಿದ ತಪ್ಪಿಗೆ ತಕ್ಕ ದಂಡನೆಯನ್ನು ಹೊಂದಿದೆನು;

ಪೊಳಲ್=ಪಟ್ಟಣ; ಮಗುಳ್ದು+ವಂದು; ಮಗುಳ್=ಹಿಂತಿರುಗು; ವಂದು=ಬಂದು;

**ಎಂದು ಚಿಂತಿಸುತ್ತುಮ್ ಪೊಳಲ್ಗೆ ಮಗುಳ್ದುವಂದು**=ಎಂದು ಚಿಂತಿಸುತ್ತ ಹಸ್ತಿನಾವತಿಗೆ ಹಿಂತಿರುಗಿ ಬಂದು;

ವಿದುರ+ಅರ್+ಕಳ್+ಗೆ; ತತ್+ವೃತ್ತಾಂತಮ್; ತತ್=ಆ ; ವೃತ್ತಾಂತ=ಸಂಗತಿ/ಸುದ್ದಿ;

**ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗೆ ತದ್ವೃತ್ತಾಂತವ್ ಎಲ್ಲಮುವ್ ಪೇಳ್ದು**=ಗಾಂಗೇಯ, ಧೃತರಾಷ್ಟ್ರ ಮತ್ತು ವಿದುರರಿಗೆ ಕಾಡಿನಲ್ಲಿ ನಡೆದ ಸಂಗತಿಯೆಲ್ಲವನ್ನೂ ವಿವರವಾಗಿ ತಿಳಿಸಿ;

ಸಮಸ್ತ=ಸಕಲ/ಎಲ್ಲವನ್ನು; ದೀನ=ಬಡವ; ಅನಾಥ+ಜನವ್+ಗಳ್ಗೆ; ಅನಾಥ=ದಿಕ್ಕಿಲ್ಲದವನು/ತಬ್ಬಲಿ; ಸೂಱೆ+ಕೊಟ್ಟು; ಸೂಱೆ=ಅತಿಶಯ/ಹೆಚ್ಚಾಗಿ; ಸೂಱೆಗೊಡು=ದೊಡ್ಡ ಪ್ರಮಾಣದಲ್ಲಿ ದಾನಮಾಡು;

**ಸಮಸ್ತವಸ್ತುಗಳಮ್ ದೀನ ಅನಾಥಜನಂಗಳ್ಗೆ ಸೂಱೆಗೊಟ್ಟು**=ಪಾಂಡುರಾಜನು

ತನ್ನ ಬಳಿಯಿದ್ದ ಸಕಲ ವಸ್ತುಗಳೆಲ್ಲವನ್ನೂ ಬಡವರಿಗೆ ಮತ್ತು ದಿಕ್ಕಿಲ್ಲದ ಜನರಿಗೆ ದಾನಮಾಡಿ;

ನಿಜ=ತನ್ನ; ಪರಿವಾರಮ್+ಅಮ್; ಪರಿವಾರ=ಕುಟುಂಬಕ್ಕೆ ಸೇರಿದ ಜನರು, ನೆಂಟರು ಮತ್ತು ಬೇಕಾದವರು;

**ನಿಜ ಪರಿವಾರಮಮ್ ಬರಿಸಿ**=ಪಾಂಡುರಾಜನು ತನ್ನ ಪರಿವಾರದವರನ್ನೆಲ್ಲಾ ಬಳಿಗೆ ಕರೆಸಿಕೊಂಡು;

ಅನಂಗ=ಮದನ/ಕಾಮದೇವ; ಜಂಗಮ=ಬಳುಕುವ; ಲತಾ=ಬಳ್ಳಿ; ಲಲಿತ+ಅಂಗಿಯರ್+ಇಂದಮ್; ಲಲಿತ=ಚೆಲುವು/ಸುಂದರ; ಅಂಗ=ದೇಹ; ಲಲಿತಾಂಗಿ=ಚೆಲುವೆ/ಸುಂದರಿ; ಅಲ್ತೆ=ಅಲ್ಲವೇ; ಸಂಸಾರ=ಕುಟುಂಬ/ಜೀವನ; ಸಾರ=ತಿರುಳು/ಉತ್ತಮವಾದುದು;

**ಅನಂಗ ಜಂಗಮಲತಾ ಲಲಿತಾಂಗಿಯರಿಂದಮ್ ಅಲ್ತೆ ಸಂಸಾರಮ್ ಎಂಬುದು ಸಾರಮ್**= ಜೀವನದಲ್ಲಿ ಸಾರವತ್ತಾದುದು ಎಂದರೆ ಮದನನ ಬಳುಕುವ ಬಳ್ಳಿಗಳಂತಿರುವ ಚೆಲುವೆಯರೊಡನೆ ಒಲವು ನಲಿವಿನಿಂದ ಕೂಡಿಬಾಳುವುದಲ್ಲವೇ; ಅಂತಹ ಚೆಲುವೆಯರ ಒಡನಾಟವಿಲ್ಲವೆಂದರೆ ಬದುಕಿನಲ್ಲಿ ಯಾವುದೇ ಬಗೆಯ ಆನಂದವೂ ಇಲ್ಲ, ಗುರಿಯೂ ಇಲ್ಲ;

ಇದು=ಹೆಂಡತಿಯರೊಡನೆ ಕಾಮದ ನಂಟನ್ನು ಹೊಂದಿ ಬಾಳುವ ಆನಂದ; ತತ್+ಮುನಿ; ಶಾಪ+ಇಂದಮ್; ಇನ್=ಇನ್ನು ಮುಂದೆ; ತಪ್ಪುದು=ಇಲ್ಲದಂತಾಯಿತು;

**ಇದು ತನ್ಮುನಿ ಶಾಪದಿಂದಮ್ ಇನ್ ಎನಗೆ ತಪ್ಪುದು**= ಹೆಂಡತಿಯರೊಡನೆ ಕಾಮದ ನಂಟನ್ನು ಹೊಂದಿ ಬಾಳುವ ಆನಂದವು ಆ ಕಿಂದಮ ಮುನಿಯು ನೀಡಿದ ಶಾಪದಿಂದ ಇನ್ನು ಮುಂದೆ ನನ್ನ ಬಾಳಿನಲ್ಲಿ ದೊರೆಯದಂತಾಯಿತು;

ವನವಾಸ+ಒಳ್; ವನವಾಸ=ಕಾಡಿನಲ್ಲಿ ನೆಲೆಸುವುದು; ಇರ್ಪೆನ್=ಇರುವೆನು;

**ವನವಾಸದೊಳ್ ಇರ್ಪೆನ್**=ಆದ್ದರಿಂದ ನಾನು ಕಾಡಿನಲ್ಲಿ ವಾಸಮಾಡುತ್ತೇನೆ;

ಇದರ್ಕೆ=ಇದಕ್ಕೆ; ಇನ್ನು+ಆರುಮ್; ಆರುಮ್=ಯಾರೊಬ್ಬರೂ; ವಕ್ರ=ತೊಂದರೆ/ಅಡ್ಡಿ; ವಕ್ರಿಸದಿರಿ=ಅಡ್ಡಿಪಡಿಸಬೇಡಿ; ದುರ್ವಾರ=ಯಾರಿಂದಲೂ ತಡೆಯಲಾಗದ; ಪರಾಕ್ರಮನ್=ವೀರ; ತಳರು=ಹೊರಡು/ತೆರಳು;

**ಇದರ್ಕೆ ಇನ್ನಾರುಮ್ ವಕ್ರಿಸದಿರಿಮ್ ಎಂದು ದುರ್ವಾರ ಪರಾಕ್ರಮನ್ ತಳರೆ** =ನನ್ನ ನಿಲುವಿಗೆ ಯಾರೂ ಅಡ್ಡಿ ಮಾಡಬೇಡಿ ಎಂದು ಹೇಳಿ ನಿಶ್ಚಿತ ಮನದ ಪಾಂಡುರಾಜನು ಕಾಡಿನತ್ತ ನಡೆಯಲು;

ಬಾರಿಸು/ವಾರಿಸು=ತಡೆಯುವುದು/ಅಡ್ಡಿಪಡಿಸುವುದು;

**ಬಾರಿಸಿ ವಾರಿಸಿ**=ಪಾಂಡುವನ್ನು ಕಾಡಿಗೆ ತೆರಳಬೇಡವೆಂದು ಅಡ್ಡಿಪಡಿಸಿ ಅವನನ್ನು ಹೋಗಬೇಡವೆಂದು ಬೇಡಿಕೊಳ್ಳುತ್ತ;

**ಬೆನ್ನ ಬೆನ್ನನೆ ಬರೆ**=ಹಿಂಬಾಲಿಸಿಕೊಂಡು ಬರುತ್ತಿರಲು;

**ಕುಂತಿ ಮಾದ್ರಿಯರ್ ಬೆನ್ನ ಬೆನ್ನನೆ ಬರೆ**=ಕುಂತಿ ಮಾದ್ರಿಯರು ಪಾಂಡು ರಾಜನನ್ನೇ ಹಿಂಬಾಲಿಸಿಕೊಂಡು ಬರುತ್ತಿರಲು;

ಬಿನ್ನ=ಏನೊಂದು ಮಾತನಾಡದೆ;

**ಬಿನ್ನ ಬಿನ್ನನೆ ಪೋಗಿ**=ತನ್ನನ್ನು ಹಿಂಬಾಲಿಸಿಕೊಂಡು ಬಂದ ಕುಂತಿ ಮಾದ್ರಿಯರೊಡನೆ ಪಾಂಡುರಾಜನು ಏನೊಂದು ಮಾತನಾಡದೆ ಸುಮ್ಮನೆ ಕಾಡಿನತ್ತ ತೆರಳಿದನು;

ತುಂಗ=ಎತ್ತರವಾದ/ದೊಡ್ಡದಾದ; ವನ್ಯ=ಕಾಡಿನಲ್ಲಿ ಹುಟ್ಟಿ ಬೆಳೆದ; ಮತಂಗಜ=ಆನೆ; ದಂತ+ಆಘಾತ; ದಂತ=ಆನೆಯ ಕೋರೆ; ಆಘಾತ=ಪೆಟ್ಟು; ನಿಪಾತ=ಹಾಳು/ನಾಶ/ಪತನ; ಸಲ್ಲಕೀ=ಬೇಲದ ಮರ; ಭಂಗ=ತುಂಡು/ಮುರಿಯುವಿಕೆ;

**ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ ಭಂಗಮಮ್**=ದೊಡ್ಡಗಾತ್ರದ ಕಾಡಾನೆಯ ದಂತದ ತಿವಿತಕ್ಕೆ ಮುರಿದು ಕೆಳಕ್ಕೆ ಬಿದ್ದಿರುವ ಬೇಲದ ಮರದಿಂದ ಕೂಡಿದ;

ಮಣಿ=ರತ್ನ; ಮೌಕ್ತಿಕ=ಮುತ್ತು; ನೀಳ=ನೀಲಿ ಬಣ್ಣದ ಹರಳು; ಸ್ಥೂಳ=ದಪ್ಪನಾದ; ಶಿಲಾ=ಕಲ್ಲಿನ ಬಂಡೆ; ಪ್ರವಿಭಾಸಿತ+ಉತ್ತುಂಗಮ್+ಅಮ್; ಪ್ರವಿಭಾಸಿತ=ಚೆನ್ನಾಗಿ ಹೊಳೆಯುವ; ಉತ್ತುಂಗ=ಎತ್ತರವಾದ/ಉನ್ನತವಾದ;

**ಮಣಿಮೌಕ್ತಿಕ ನೀಳ ಸ್ಥೂಳ ಶಿಲಾ ಪ್ರವಿಭಾಸಿತೋತ್ತುಂಗಮಮ್**=ಮುತ್ತು ರತ್ನ ನೀಲಿಯ ಹರಳುಗಳ ಬಣ್ಣದಿಂದ ಕಂಗೊಳಿಸುತ್ತಿರುವ ಉನ್ನತವಾದ ಕಲ್ಲುಬಂಡೆಗಳಿಂದ ಕೂಡಿರುವ;

ಮುಖ್ಯ=ಹಿರಿಮೆ/ದೊಡ್ಡದು; ಮುಖ+ಅಂಭೋಜ+ಉದರ; ಅಂಭೋಜ=ತಾವರೆ; ಉದರ=ನಡುವೆ; ನಿರ್ಗತ=ಹೊರಹೊಮ್ಮಿದ; ಮಂತ್ರ=ದೇವತೆಗಳ ಮಹಿಮೆಯನ್ನು ಕೊಂಡಾಡುವ ನುಡಿಗಳು; ಪೂತ+ಅಂಗಮ್+ಅಮ್; ಪೂತ=ಪವಿತ್ರವಾದದು; ಅಂಗ=ಭಾಗ;

**ಮುನಿ ಮುಖ್ಯ ಮುಖಾಂಭೋಜೋದರ ನಿರ್ಗತ ಮಂತ್ರ ಪೂತಾಂಗಮಮ್** =ದೊಡ್ಡ ಮುನಿಗಳ ಮೊಗತಾವರೆಯ ಬಾಯಿಂದ ಹೊರಹೊಮ್ಮುತ್ತಿರುವ ಪವಿತ್ರವಾದ ಮಂತ್ರಗಳಿಂದ ಕೂಡಿರುವ;

ಉದ್ಯತ್+ಶೃಂಗಮ್+ಅನ್; ಉದ್ಯತ್=ಎತ್ತರವಾದದು; ಶೃಂಗ=ಬೆಟ್ಟದ ತುದಿ/ ಕೋಡು; ಉದ್ಯತ್ ಶೃಂಗ=ಎತ್ತರೆತ್ತರವಾದ ಕೋಡುಗಳಿಂದ ಕೂಡಿರುವ ಬೆಟ್ಟ; ಶತ=ನೂರು; ಶತಶೃಂಗಮ್+ಅಮ್; ಶತಶೃಂಗ=ಒಂದು ಪರ್ವತದ ಹೆಸರು. ಅತ್ಯಂತ ಎತ್ತರವಾದ ಕೋಡುಗಳಿಂದ ಕೂಡಿದ ಬೆಟ್ಟಗಳ ಶ್ರೇಣಿಯಿಂದ ಕೂಡಿರುವ ಪರ್ವತದ ನೆಲೆ; ನೃಪನ್+ಎಯ್ದಿದನ್; ನೃಪ=ರಾಜ; ಎಯ್=ಸೇರು/ಬರು; ಎಯ್ದಿದನ್= ಸೇರಿದನು/ಬಂದನು;

**ಉದ್ಯಚ್ಛೃಂಗಮನ್ ಆ ಶತಶೃಂಗಮಮ್ ನೃಪನೆಯ್ದಿದನ್**=ಉನ್ನತವಾದ ಕೋಡುಗಳಿಂದ ಕೂಡಿದ್ದ ಶತಶೃಂಗ ಪರ್ವತದ ನೆಲೆಗೆ ಪಾಂಡುರಾಜನು ಬಂದನು.)

✦

# ಶಾಪಕ್ಕೆ ಗುರಿಯಾದ ಪಾಂಡುರಾಜ
# ಪಂಪ ಭಾರತ ಪಠ್ಯ–ಪ್ರಥಮಾಶ್ವಾಸ

ವ॥ ಅಂತಾಕೆಗಳಿರ್ವರುಮೆರಡುಂ ಕೆಲದೊಳಿರೆ ಕಲ್ಪಲತೆಗಳೆರಡಱ ನಡುವಣ ಕಲ್ಪವೃಕ್ಷಮಿರ್ಪಂತಿರ್ದ ಪಾಂಡುರಾಜಂಗೆ ಧೃತರಾಷ್ಟ್ರನಂಗಹೀನನೆಂದು ವಿವಾಹದೊಸಗೆಯೊಡನೆ ಪಟ್ಟಬಂಧದೊಸಗೆಯಂ ಮಾಡಿ ನೆಲನನಾಳಿಸೆ–

**ಉ॥ ಮೀಱುವೆರೆಂಬ ಮಾಂಡಳಿಕರೀಯದರೆಂಬದಟರ್ ವಯಲ್ಗೆ ಮೆ**
**ಯ್ದೋಱುವೆವೆಂಬ ಪೂಣಿಗರಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾ**
**ಯ್ಪಾಱಿ ನಭಕ್ಕೆ ಪಾಱಿದುದು ಗಂಡರ ನೆತ್ತಿಯೊಳೊತ್ತಿ ಬಾಳನಿ**
**ನ್ನೂಱುಗುಮೆಂದೊಡೇಂ ಪಿರಿದೊ ತೇಜದ ದಳ್ಳುರಿ ಪಾಂಡುರಾಜನಾ. ॥109॥**

**ಮ॥ ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ ಪ್ರತಾಪಕ್ಕಗು**
**ರ್ವಿಸೆ ಗೋಳುಂಡೆಗೊಳುತ್ತುಮಿರ್ದುದು ದಿಶಾಚಕ್ರಂ ಪೊದಟ್ದಾಜ್ಞೆಗಂ**
**ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ ಸಮಂತೆಂಬಿನಂ**
**ಜಸಮಾ ಪಾಂಡುರಮಾದುದಾ ನೃಪರೊಳಾರಾ ಪಾಂಡುರಾಜಂಬರಂ ॥110॥**

ವ॥ ಅಂತು ಪಾಂಡುರಾಜನಧಿಕತೇಜನುಮವನತವೈರಿಭೂಭೃತ್ಸಮಾಜನುಮಾಗಿ ನೆಗೞುತ್ತಿರ್ದೊಂದು ದಿವಸಂ ತೋಪಿನ ಬೇಂಟೆಯನಾಡಲಱ್ತಿಯಿಂ ಪೋಗಿ

**ಚಂ॥ ಇನಿಯಳನಱ್ತಿಯಿಂದೆ ಮೃಗಿ ಮಾಡಿ ಮನೋಜಸುಖಕ್ಕೆ ಸೋಲ್ತಲಂ**
**ಪಿನೆ ನೆರೆಯಲ್ಕೆ ದಿವ್ಯಮುನಿಯುಂ ಮೃಗಮಾಗಿ ಮರಲ್ದು ಕೂಡೆ ಮೆ**
**ಲ್ಲನೆ ಮೃಗಮೆಂದು ಸಾರ್ದು ನೆಱನಂ ನಡೆ ನೋಡಿ ನರೇಂದ್ರನೆಚ್ಚು ಭೋಂ**
**ಕನೆ ಮೃಗಚಾರಿಯಂ ತನಗೆ ಮಾಣದೆ ತಂದನದೊಂದು ಮಾರಿಯಂ ॥111॥**

ವ॥ ಆಗಳ್ ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳಮೆರ್ದೆಯೊಳಮುಕ್ಕೆ ಪೇೞಿಮೆನ್ನನಾವನೆಚ್ಚನೆಂಬ ಮುನಿಯ ಮುನಿದ ಸರಮಂ ಕೇಳ್ದು ಬಿಲ್ಲನಂಬುಮನೀಡಾಡಿ ತನ್ನ ಮುಂದೆ ನಿಂದಿರ್ದ ಭೂಪನಂ ಮುನಿ ನೋಡಿ–

ಉ॥ ಸನ್ನುತದಿಂ ರತಕ್ಕೆಳಸಿ ನಲ್ಲಳೊಳೋತೊಡಗೂಡಿದೆನ್ನನಿಂ
ತನ್ನಯಮೆಚ್ಚುದರ್ಕೆ ಪೆಱತಿಲ್ಲದು ದಂಡಮೊಱಲ್ದು ನಲ್ಲಳೊಳ್
ನೀನ್ನಡೆನೋಡಿಯುಂ ಬಯಸಿ ಕೂಡಿಯುಮಾಗಡೆ ಸಾವೆಯಾಗಿ ಪೋ
ಗಿನ್ನೆನೆ ರೌದ್ರಶಾಪಪರಿತಾಪವಿಳಾಪದೊಳಾ ಮಹೀಶ್ವರಂ ॥112॥

ವ॥ ಎನ್ನ ಗೆಯ್ದ ಕಾಮಾಕ್ರಾಂತಕ್ಕೆ ಕಾಮಕೃತಮೇಂ ಪಿರಿದಲ್ತು

ಕಂ॥ ಎತ್ತ ವನಮೆತ್ತ ಮೃಗಯಾ
ವೃತ್ತಕಮೀ ತಪಸಿಯೆತ್ತ ಮೃಗಮೆಂದೆಂತಾ
ನೆತ್ತೆಚ್ಚೆನಾತ್ಮಕರ್ಮಾ
ಯತ್ತಂ ಪೆಱತಲ್ತಿದೆಲ್ಲಮಘಟಿತಘಟಿತಂ. ॥113॥

ವ॥ ಎಂದು ಚಿಂತಿಸುತ್ತುಂ ಪೊಱಲ್ಗೆ ಮಗುೞ್ದುವಂದು ಗಾಂಗೇಯ ಧೃತರಾಷ್ಟ್ರ
ವಿದುರರ್ಕಳ್ಗೆ ತದ್ವೃತ್ತಾಂತಮೆಲ್ಲಮಂ ಪೇೞ್ದು ಸಮಸ್ತವಸ್ತುಗಳಂ
ದೀನಾನಾಥಜನಂಗಳ್ಗೆ ಸೂಱೆಗೊಟ್ಟು ನಿಜಪರಿವಾರಮಂ ಬರಿಸಿ–

ಉ॥ ಸಾರಮನಂಗ ಜಂಗಮಲತಾ ಲಲಿತಾಂಗಿಯರಿಂದಮಲ್ತೆ ಸಂ
ಸಾರಮಿದೆಂಬುದಿನ್ನೆನಗೆ ತಪ್ಪುದು ತನ್ಮುನಿ ಶಾಪದಿಂದಿಮಿ
ನ್ನಾರುಮಿದರ್ಕೆ ವಕ್ರಿಸದಿರಿಂ ವನವಾಸದೊಳಿರ್ಪೆನೆಂದು ದು
ರ್ವಾರ ಪರಾಕ್ರಮಂ ತಳರೆ ಬಾರಿಸಿವಾರಿಸಿ ಕುಂತಿ ಮಾದ್ರಿಯರ್. ॥114॥

ವ॥ ಬೆನ್ನ ಬೆನ್ನನೆ ಬರೆ ಬಿನ್ನ ಬಿನ್ನನೆ ಪೋಗಿ–

ಖಚರಪ್ಲುತ ॥ ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ
ಭಂಗಮಂ ಮಣಿಮೌಕ್ತಿಕ ನೀಳ ಸ್ಥೂಳ ಶಿಲಾ ಪ್ರವಿಭಾಸಿತೋ
ತ್ತುಂಗಮಂ ಮುನಿಮುಖ್ಯಮುಖಾಂಭೋಜೋದರ ನಿರ್ಗತಮಂತ್ರ ಪೂ
ತಾಂಗಮಂ ನೃಪನೆಯ್ದಿದನುದ್ಯಚ್ಛೃಂಗಮನಾ ಶತಶೃಂಗಮಂ ॥115॥

# ೭. ಕುಂತಿಯ ಬಯಕೆ

## ಪಾತ್ರಗಳು

**ಪಾಂಡುರಾಜ:** ಕುಂತಿ ಮತ್ತು ಮಾದ್ರಿಯರ ಗಂಡ. ಕಿಂದಮನೆಂಬ ರಿಸಿಯ ಶಾಪದ ಕಾರಣದಿಂದಾಗಿ ಹಸ್ತಿನಾವತಿಯ ರಾಜ್ಯಪಟ್ಟವನ್ನು ತೊರೆದು ಕಾಡಿನಲ್ಲಿ ನೆಲೆಸಿದ್ದಾನೆ.

**ಕುಂತಿ:** ಪಾಂಡುರಾಜನ ಹೆಂಡತಿ

**ದುರ್ವಾಸ:** ಒಬ್ಬ ಮುನಿ.

**ಕುಂತಿಭೋಜ:** ಕುಂತಳ ದೇಶದ ರಾಜ. ಕುಂತಿಯ ಸಾಕು ತಂದೆ. ಶೂರಸೇನನ ಸೋದರತ್ತೆಯ ಮಗನಾದ ಕುಂತಿಭೋಜನು ತನಗೆ ಮಕ್ಕಳಿಲ್ಲದ್ದರಿಂದ ಕುಂತಿಯು ಚಿಕ್ಕ ವಯಸ್ಸಿನ ಬಾಲೆಯಾಗಿದ್ದಾಗಲೇ ಅವಳನ್ನು ದತ್ತು ಮಗಳನ್ನಾಗಿ ಪಡೆದಿದ್ದನು.

**ಧೃತರಾಷ್ಟ್ರ:** ಹಸ್ತಿನಾವತಿಯ ರಾಜ. ಪಾಂಡುರಾಜನ ಅಣ್ಣ

**ಗಾಂಧಾರಿ:** ಧೃತರಾಷ್ಟ್ರನ ಹೆಂಡತಿ. ಪಟ್ಟದ ರಾಣಿ

**ಯಮರಾಜ:** ದೇವಲೋಕದಲ್ಲಿರುವ ಒಬ್ಬ ದೇವತೆ

**ಪರಾಶರ:** ಒಬ್ಬ ಮುನಿ. ಬ್ರಹ್ಮನ ಮೊಮ್ಮಗ

# ಕುಂತಿಯ ಬಯಕೆ

ಪಾಂಡುರಾಜನ್ ಈ ತಪೋವನಮೆ ಪಾವನಮ್ ಎಂದು ತಪೋವನದ ಮುನಿಜನದ ಪರಮ ಅನುರಾಗಮನ್ ಪೆರ್ಚಿಸಿ, ಕಾಮಾನುರಾಗಮನ್ ಬೆರ್ಚಿಸಿ ತದಾಶ್ರಮದೊಳ್ ಆಶ್ರಮಕ್ಕೆ ಗುರುವಾಗೆ ಇರ್ಪನ್ನೆಗಮ್, ಇತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳನ್ ಪಡೆವಂತು ಪರಾಶರ ಮುನೀಂದ್ರನೊಳ್ ಬರಮ್ ಪಡೆದಳ್ ಎಂಬುದನ್ ಕುಂತಿ ಕೇಳ್ದು ತಾನುಮ್ ಪುತ್ರಾರ್ಥಿಯಾಗಲ್ ಬಗೆದು...

ಕುಂತಿ: (ಪಾಂಡುರಾಜನ ಮುಂದೆ)

ವಿರೋಧಿ ನೃಪರನ್ ವಿಸಸನದೊಳ್ ತಱಿದು ಒಟ್ಟಲುಮ್, ಅರ್ಥಿಗೆ ಅರ್ಥಮನ್ ಕಸವಿನ ಲೆಕ್ಕವಮ್ ಎಂದು ಕುಡಲುವಮ್, ವಿಪುಳ ಆಯತಿಯಮ್ ದಿಗಂತದೊಳ್ ಪಸರಿಸಲುಮ್ ಕರಮ್ ನೆಱೆವ ಮಕ್ಕಳನ್ ಈಯದೆ, ನೋಡೆ ಇಕ್ಷುಪುಷ್ಪದವೊಲ್ ಎನ್ನಯ ನಿಷ್ಫಲ ಪುಷ್ಪದರ್ಶನಮ್ ನಾಡೆ ನೋಯಿಸಿದಪುದು.

(ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯನ್ ಕಂಡು ಪಾಂಡುರಾಜನ್ ಏಕಾಂತದೊಳ್ ಇಂತು ಎಂದನ್.)

ಪಾಂಡುರಾಜ: ತಳೋದರೀ, ಚಿಂತೆ ಇದೇನೊ... ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡೆ ಇನ್ನು ಇಂತಿರಬೇಡ. ನಿಜ ಬಗೆ ತೀರ್ಪಿನಮ್ ಅತ್ಯಂತ ಪತಿವ್ರತಾಗುಣದಿನ್ ದಿವ್ಯ ಮುನಿಪುಂಗವರಮ್ ನೀನ್ ಅರ್ಚಿಸಿ ಮೆಚ್ಚಿಸು. ದಿಗಂತ ವಿಶ್ರಾಂತ ಯಶರ್ಕಳಮ್ ವರ ತನೂಭವರನ್ ನೀನ್ ಪಡೆ.

ಕುಂತಿ: ಎನ್ನ ಕನ್ನಿಕೆಯಾ ಕಾಲದೊಳ್ ನಾನ್ ಎನ್ನ ಮಾವನ್ ಕೊಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸ ಮಹಾಮುನಿಯರ್ ಎಮ್ಮ ಮನೆಗೆ ನಿಚ್ಚಕ್ಕಮ್ ಬರ್ಪರ್. ಅವರ್ ಎನ್ನ ವಿನಯಕ್ಕಮ್ ಭಕ್ತಿಗಮ್ ಬೆಸಕೆಯ್ವುದರ್ಕಮ್ ಮೆಚ್ಚಿ ಮಂತ್ರಾಕ್ಷರಂಗಳನ್ ಅಯ್ದುಮ್ ವರವಿತ್ತರ್.

"ಈ ಅಯ್ದು ಮಂತ್ರಕೆ ನಿನ್ನ ಬಗೆಗೆ ಬಂದವರನ್ ಆಹ್ವಾನಮ್ ಗೆಯ್ಯಲ್ ಅವರ ಪೋಲ್ವೆಯ ಅಯ್ವರ್ ಮಕ್ಕಳನ್ ಪಡೆವೆ" ಎಂದು ಬೆಸಸಿದೊಡೆ, ಈಗಳ್ ಎನ್ನ ಪುಣ್ಯದಿನ್ ಒಳ್ಳಿತ್ತು ದೊರೆಕೊಂಡುದು.

ಪಾಂಡುರಾಜ: ಅದರ್ಕೆ ಏನುಮ್ ಚಿಂತಿಸಲ್ವೇಡ. ದಿವ್ಯ ಮುನಿ ವಾಕ್ಯಮ್ ಅಮೋಘ ವಾಕ್ಯಮ್ ಅಕ್ಕುಮ್.

ಕುಂತಿ: ಅಂತೆ ಗೆಯ್ವೆನ್

(ಎಂದು ಸರೋಜಾನನೆ ತೀರ್ಥಜಲಂಗಳಮ್ ಮಿಂದು, ದಳಿಂಬವನ್ ಉಟ್ಟು, ಮುತ್ತಿನ ತೊಡಿಗೆಗಳನ್ ತೊಟ್ಟು, ದರ್ಭಶಯನದೊಳ್ ಇರ್ದು.. ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂತಾನಮನ್ ಓದಿ ಓದಿ ಜ್ಞಾನದಿನ್ ಇರ್ದು, ನಿಟ್ಟೆಪೊಡೆ ಯಮರಾಜನನ್ ಅದ್ಭುತ ತೇಜನನ್ ಜಾನದಿಮ್ ಬರಿಸೆ, ಯಮನ್ ಬಂದು...)

ಯಮ: ಆತ್ಮಾನುಗತಾರ್ಥಮ್ ಬೆಸನ್ ಆವುದು?

ಕುಂತಿ: ನಿನ್ನನೆ ಪೋಲ್ವ ಪುತ್ರನನ್ ಎನಗೆ ಈವುದು.

ಯಮ: ತಥಾಸ್ತು.

(ಎಂದು ಯಮಭಟ್ಟಾರಕನ್ ತನ್ನ ಅಂಶಮನ್ ಆಕೆಯ ಗರ್ಭದೊಳ್ ಅವತರಿಸಿ ಅಂತರ್ಧಾನಕ್ಕೆ ಸಂದನ್.)

✦

## ಕುಂತಿಯ ಬಯಕೆ
## ಪದ ವಿಂಗಡಣೆ ಮತ್ತು ತಿರುಳು

ತಪ=ದೇವತೆಗಳ ಹೆಸರು ಹಾಗೂ ಅವರ ಮಹಿಮೆಯನ್ನು ಕೊಂಡಾಡುತ್ತ, ಒಳ್ಳೆಯ ಅರಿವನ್ನು ಪಡೆಯುವ ಓದು ಹಾಗೂ ಚಿಂತನೆಯಲ್ಲಿ ತೊಡಗುವುದು; ವನ=ಕಾಡು; ತಪೋವನ=ತಪಸ್ಸಿನಲ್ಲಿ ತೊಡಗಿರುವ ರಿಸಿಗಳು ನೆಲೆಸಿರುವ ಕಾಡು; ಪಾವನ=ಪವಿತ್ರವಾದುದು;

**ಪಾಂಡುರಾಜನ್ ಈ ತಪೋವನಮೆ ಪಾವನಮ್ ಎಂದು**=ಪಾಂಡುರಾಜನು ಈ ತಪೋವನವೇ ಪವಿತ್ರವೆಂದು ತಿಳಿದುಕೊಂಡು, ಅಂದರೆ ತಾನು ನೆಲೆಸುವುದಕ್ಕೆ ಸರಿಯಾದ ಜಾಗವೆಂದು ನಿಶ್ಚಯಿಸಿಕೊಂಡು;

ಮುನಿ=ರಿಸಿ; ಮುನಿಜನ=ರಿಸಿಗಳು; ಪರಮ=ಅತಿಶಯವಾದ; ಅನುರಾಗಮ್+ಅನ್; ಅನುರಾಗ=ಒಲವು; ಅನ್=ಅನ್ನು; ಪೆರ್ಚು=ಹೆಚ್ಚು/ಹಿರಿದಾಗು/ದೊಡ್ಡದಾಗು;

**ತಪೋವನದ ಮುನಿಜನದ ಪರಮ ಅನುರಾಗಮನ್ ಪೆರ್ಚಿಸಿ**=ತಪೋವನದಲ್ಲಿದ್ದ ಮುನಿಜನಗಳ ಬಗ್ಗೆ ಹೆಚ್ಚಿನ ಒಲವನ್ನು ತಳೆದು;

ಕಾಮ+ಅನುರಾಗವನ್+ಅನ್; ಕಾಮ=ಗಂಡು ಹೆಣ್ಣಿನ ದೇಹಗಳು ಜತೆಗೂಡುವುದು; ಅನುರಾಗ=ಒಲವು; ಬೆರ್ಚು=ಹೆದರು/ಅಂಜು; ಬೆರ್ಚಿಸಿ=ಅಂಜುವಂತೆ ಮಾಡಿ ಅಂದರೆ ಮಯ್ ಮನವನ್ನು ಕಾಡದಂತೆ ಎಚ್ಚರವುಳ್ಳವನಾಗಿ;

**ಕಾಮಾನುರಾಗಮನ್ ಬೆರ್ಚಿಸಿ**=ತನ್ನ ದೇಹದಲ್ಲಿ ತುಡಿಯುವ ಕಾಮದ ಬಯಕೆಯನ್ನು ಅದುಮಿಟ್ಟು ಇಲ್ಲವೇ ಹಿಮ್ಮೆಟ್ಟಿಸಿ;

ತತ್+ಆಶ್ರಮ+ಒಳ್; ತತ್=ಆ ; ಆಶ್ರಮ=ರಿಸಿಗಳ ವಾಸಿಸುವ ನೆಲೆ; ಒಳ್=ಅಲ್ಲಿ; ಗುರು+ಆಗೆ; ಗುರು=ಹಿರಿಯ; ಇರ್ಪ+ಅನ್ನೆಗಮ್; ಇರ್ಪ=ಇರುವ; ಅನ್ನೆಗಮ್=ತನಕ/ವರೆಗೆ; ಇರ್ಪನ್ನೆಗಮ್=ಇರುವಾಗ;

**ತದಾಶ್ರಮದೊಳ್ ಆಶ್ರಮಕ್ಕೆ ಗುರುವಾಗೆ ಇರ್ಪನ್ನೆಗಮ್**=ಆ ಆಶ್ರಮದಲ್ಲಿ ಎಲ್ಲರ ಆದರಕ್ಕೆ ಪಾತ್ರನಾಗಿ ಬಾಳುತ್ತಿರುವಾಗ;

ಇತ್ತ=ಈ ಕಡೆ; ಮಹಾದೇವಿ+ಅಪ್ಪ; ಮಹಾದೇವಿ=ಪಟ್ಟದ ರಾಣಿ; ಅಪ್ಪ=ಆಗಿರುವ; ನೂರ್ವರ್=ನೂರು ಮಂದಿ; ಪಡೆವ+ಅಂತು; ಪಡೆ=ಹೊಂದು; ಅಂತು=ಹಾಗೆ; ಪರಾಶರ+ಮುನೀಂದ್ರ+ಒಳ್; ಮುನೀಂದ್ರ=ದೊಡ್ಡ ರಿಸಿ; ಒಳ್=ಅಲ್ಲಿ; ಬರ=ವರ; ಬರಮ್=ವರವನ್ನು; ಎಂಬುದನ್=ಎನ್ನುವ ಸುದ್ದಿಯನ್ನು;

**ಇತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳನ್ ಪಡೆವಂತು ಪರಾಶರಮುನೀಂದ್ರನೊಳ್ ಬರಮ್ ಪಡೆದಳ್ ಎಂಬುದನ್ ಕುಂತಿ ಕೇಳ್ದು**=ಇತ್ತ ಹಸ್ತಿನಾವತಿಯಲ್ಲಿ ಧೃತರಾಷ್ಟ್ರನ ಮಡದಿಯಾದ ಗಾಂಧಾರಿಯು ಪರಾಶರಮುನಿಯಿಂದ ಒಂದು ನೂರು ಮಕ್ಕಳನ್ನು ಹಡೆಯುವ ವರವನ್ನು ಪಡೆದುಕೊಂಡಳು ಎಂಬ ಸುದ್ದಿಯನ್ನು ಕುಂತಿಯು ಕೇಳಿ;

ತಾನ್+ಉವ್;ಉವ್=ಊ; ಪುತ್ರ+ಅರ್ಥಿ+ಆಗಲ್; ಪುತ್ರ=ಮಗ; ಅರ್ಥಿ=ಪಡೆಯಬೇಕೆಂಬ ಆಸೆ; ಬಗೆ=ಎಣಿಸು/ಯೋಚಿಸು;

**ತಾನುಮ್ ಪುತ್ರಾರ್ಥಿಯಾಗಲ್ ಬಗೆದು**=ಗಾಂಧಾರಿಯಂತೆಯೇ ತಾನೂ ಮಗನನ್ನು ಪಡೆಯಬೇಕೆಂಬ ಹಂಬಲಕ್ಕೆ ಒಳಗಾಗಿ;

ವಿರೋಧಿ=ಹಗೆ/ಶತ್ರು; ನೃಪರ್+ಅನ್; ನೃಪ=ರಾಜ; ವಿಸಸನ+ಒಳ್; ವಿಸಸನ=ಸಂಗ್ರಾಮ/ಕಾಳೆಗ; ತಱಿ/ತರಿ=ಕತ್ತರಿಸು; ಒಟ್ಟಲ್+ಉಮ್; ಒಟ್ಟು=ರಾಶಿ ಮಾಡು/ಗುಡ್ಡೆ ಹಾಕು;

**ವಿರೋಧಿ ನೃಪರನ್ ವಿಸಸನದೊಳ್ ತಱಿದು ಒಟ್ಟಲುಮ್**=ಎದುರಾಗಿ ಬಂದ ಶತ್ರುರಾಜರನ್ನು ಕಾಳೆಗದಲ್ಲಿ ಕಡಿದು ತುಂಡರಿಸಿ ರಾಶಿ ಮಾಡಲು;

ಅರ್ಥಿ=ಬೇಡುವವನು/ಯಾಚಕ; ಅರ್ಥಮ್+ಅನ್; ಅರ್ಥ=ಸಂಪತ್ತು/ಹಣ/ ದ್ರವ್ಯ; ಕಸ=ಜನವಸತಿಯಿರುವ ಜಾಗವನ್ನು ಗುಡಿಸಿದಾಗ ದೊರೆಯುವ ದೂಳು ದುಂಬು ಮತ್ತು ಕೊಳಕಾದ ವಸ್ತು; ಲೆಕ್ಕ=ಗಣನೆ; ಕುಡಲ್+ಉಮ್; ಕುಡು=ನೀಡು;

**ಅರ್ಥಿಗೆ ಅರ್ಥಮನ್ ಕಸವಿನ ಲೆಕ್ಕಮ್ ಎಂದು ಕುಡಲುಮ್**=ಬೇಡಿ ಬಂದ ಯಾಚಕರಿಗೆ ತಮ್ಮ ಬಳಿಯಿರುವ ಸಂಪತ್ತನ್ನು ಕಸಕ್ಕೆ ಸಮಾನವಾಗಿ ಕಂಡು ದಾನಮಾಡಲು, ಅಂದರೆ ದಾನ ಕೊಡುವ ಸಂಪತ್ತನ್ನು ದೊಡ್ಡದೆಂದು ಎಣಿಸದೆ ಬೇಡುವವರಿಗೆ ಕಯ್ ತುಂಬ ನೀಡಲು;

ವಿಪುಲ=ವಿಶಾಲವಾದ/ದೊಡ್ಡದಾದ; ಆಯತಿ+ಅಮ್; ಆಯತಿ=ಶಕ್ತಿ/ಬಲ; ದಿಗಂತ+ಒಳ್; ದಿಗಂತ=ದಿಕ್ಕಿನ ಕೊನೆ; ಪಸರಿಸಲ್+ಉಮ್; ಪಸರಿಸು=ಹರಡು;

**ವಿಪುಳ ಆಯತಿಯಮ್ ದಿಗಂತದೊಳ್ ಪಸರಿಸಲುಮ್**=ದೊಡ್ಡದಾದ ತಮ್ಮ ಬಲವನ್ನು ದಿಕ್ಕಿನ ಎಲ್ಲೆಡೆಯಲ್ಲಿಯೂ ಹರಡುವಂತೆ ಮಾಡಲು;

ಕರ=ಹೆಚ್ಚಾಗಿ; ನೆಱೆ[3]/ನೆರೆ=ಈಡೇರು/ನಡೆದುಕೊಳ್ಳು; ಈ=ಕೊಡು; ಈಯದೆ=ಕೊಡದೆ;

**ಕರಮ್ ನೆಱೆವ ಮಕ್ಕಳನ್ ಈಯದೆ**=ಜಗತ್ತಿನಲ್ಲಿ ದೊಡ್ಡದನ್ನು ಮಾಡಿ ತೋರಿಸುವ ಮಕ್ಕಳನ್ನು ಪಡೆಯದೆ;

ನೋಡು=ಆಲೋಚಿಸು/ವಿಚಾರಮಾಡು; ಇಕ್ಷು+ಪುಷ್ಪದ+ವೊಲ್; ಇಕ್ಷು=ಕಬ್ಬು; ಪುಷ್ಪ=ಹೂವು; ಇಕ್ಷುಪುಷ್ಪ=ಸೂಲಂಗಿ; ವೊಲ್=ಅಂತೆ; ಎನ್ನಯ=ನನ್ನ; ನಿಷ್ಫಲ=ಫಲವಿಲ್ಲದ; ಪುಷ್ಪ=ದೊಡ್ಡವಳಾದ ಹೆಣ್ಣಿನ ದೇಹದಲ್ಲಿ ತಿಂಗಳಿಗೊಮ್ಮೆ ಕಂಡು ಬರುವ ಮುಟ್ಟು; ದರ್ಶನ=ಕಾಣಿಸಿಕೊಳ್ಳುವುದು; ಪುಷ್ಪದರ್ಶನ=ಮುಟ್ಟಾಗುವಿಕೆ; ನಾಡೆ=ಹೆಚ್ಚಾಗಿ/ಬಹಳವಾಗಿ; ನೋಯಿಸಿದಪುದು=ನೋವನ್ನು ನೀಡುತ್ತಿದೆ;

**ನೋಡೆ ಇಕ್ಷುಪುಷ್ಪದವೊಲ್ ಎನ್ನಯ ನಿಷ್ಫಲ ಪುಷ್ಪದರ್ಶನಮ್ ನಾಡೆ ನೋಯಿಸಿದಪುದು**=ಮಕ್ಕಳನ್ನು ಪಡೆಯದೆ ಇರುವ ನನ್ನ ಈಗಿನ ಇರುವಿಕೆಯನ್ನು ಕುರಿತು ಚಿಂತಿಸಿದಾಗ. ಕಬ್ಬಿನ ಹೂವು ಅರಳಿ ನಿಂತರೂ ಅದು ಹೇಗೆ ಯಾರಿಗೂ ಬೇಕಾಗುವುದಿಲ್ಲವೋ ಅಂತೆಯೇ ನನ್ನ ಮುಟ್ಟು ನಿಲ್ಲದೆ ಅಂದರೆ ಬಸಿರಾಗದೆ ಕಾಲ ಉರುಳುತ್ತಿರುವುದು ನನ್ನನ್ನು ಮನಸ್ಸನ್ನು ತುಂಬಾ ನೋಯಿಸುತ್ತಿದೆ;

ಚಿಂತಾ+ಆಕ್ರಾಂತೆ+ಆಗಿ+ಇರ್ದ; ಚಿಂತೆ=ಕಳವಳ/ಸಂಕಟ/ದುಗುಡ; ಆಕ್ರಾಂತ=ಕೂಡಿರುವುದು/ಹಿಡಿದಿರುವುದು; ಇರ್ದ=ಇರುವ;

ಏಕಾಂತ+ಒಳ್; ಏಕಾಂತ=ಅವಳು ಒಬ್ಬಳೇ ಇದ್ದಾಗ; ಇಂತು=ಈ ರೀತಿ;

**ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯನ್ ಕಂಡು ಪಾಂಡುರಾಜನ್ ಏಕಾಂತದೊಳ್ ಇಂತು ಎಂದನ್**=ಮಕ್ಕಳನ್ನು ಹಡೆಯಲಾಗಲಿಲ್ಲವೆಂಬ ಕೊರಗಿನಿಂದ ಸಂಕಟಪಡುತ್ತಿದ್ದ ಕುಂತಿಯನ್ನು ಪಾಂಡುರಾಜನು ಗಮನಿಸಿ, ಅವಳೊಬ್ಬಳೇ ಇದ್ದಾಗ ಈ ರೀತಿ ಹೇಳಿದನು;

ತಳೋದರಿ=ಸುಂದರಿ/ಹೆಂಡತಿ; ಸಂತತಿ=ಮನೆತನ/ಪೀಳಿಗೆ/ವಂಶ; ನೆಟ್ಟನೆ=ಅಂದವಾಗಿ/ಚೆನ್ನಾಗಿ; ಬಾರ್ತೆ+ಅಪ್ಪೊಡೆ; ಬಾರ್ತೆ=ಅಗತ್ಯ/ಅವಶ್ಯ/ಬೇಕೆಬೇಕು; ಅಪ್ಪೊಡೆ=ಆದರೆ; ಇಂತು+ಇರಬೇಡ; ಇಂತು=ಈ ರೀತಿ; ಇಂತಿರಬೇಡ=ಈ ರೀತಿ ಒಬ್ಬಳೇ ಮನದಲ್ಲಿ ಕೊರಗಬೇಡ;

**ತಳೋದರೀ, ಚಿಂತೆ ಇದೇನೊ... ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡೆ**

**ಇನ್ನು ಇಂತಿರಬೇಡ**=ಸುಂದರಿ, ಇದೇಕೆ ಈ ರೀತಿ ಚಿಂತಿಸುತ್ತಿರುವೆ. ನಮ್ಮ ವಂಶದ ಬೆಳವಣಿಗೆಗೆ ಮಕ್ಕಳು ಬೇಕೆಬೇಕು ಎಂದು ನೀನು ಬಯಸುವುದಾರೆ , ಇನ್ನು ಮುಂದೆ ಈ ರೀತಿ ಕೊರಗಬೇಡ;

ನಿಜ=ತನ್ನ/ಸ್ವಂತದ; ಬಗೆ=ಬಯಕೆ/ಆಸೆ; ತೀರ್=ಈಡೇರು/ಕಯ್ಗೂಡು; ತೀರ್ಪಿನವರ್=ಈಡೇರುವವರೆಗೂ; ಅತ್ಯಂತ=ಎಲ್ಲಕ್ಕೂ ಮಿಗಿಲಾದ; ಪತಿವ್ರತಾ+ಗುಣ+ಇನ್; ಪತಿವ್ರತಾಗುಣ=ಹೆಂಡತಿಯಾದವಳು ಗಂಡನಲ್ಲಿರುವ ಅರೆಕೊರೆಗಳೆಲ್ಲವನ್ನೂ ಸಹಿಸಿಕೊಂಡು, ಅವನನ್ನೇ ಹೆಚ್ಚಿನ ಒಲವು ನಲಿವಿನಿಂದ ನಂಬಿ ಬಾಳುವ ನಡೆನುಡಿ; ಇನ್=ಇಂದ; ದಿವ್ಯ=ಉತ್ತಮವಾದುದು; ಮುನಿ+ಪುಂಗವರ್+ಅಮ್; ಮುನಿ=ರಿಸಿ; ಪುಂಗವ=ಒಡೆಯ; ಮುನಿಪುಂಗವರ್=ದೊಡ್ಡ ದೊಡ್ಡ ಮುನಿಗಳು; ಅರ್ಚಿಸು=ಪೂಜಿಸಿ/ಸೇವೆ ಮಾಡಿ; ಮೆಚ್ಚಿಸು=ಒಲಿಸಿಕೊಳ್ಳುವುದು;

**ನಿಜ ಬಗೆ ತೀರ್ಪಿನಮ್ ಅತ್ಯಂತ ಪತಿವ್ರತಾಗುಣದಿನ್ ದಿವ್ಯ ಮುನಿಪುಂಗವರಮ್ ನೀನ್ ಅರ್ಚಿಸಿ ಮೆಚ್ಚಿಸು**=ಮಕ್ಕಳನ್ನು ಪಡೆಯಬೇಕೆಂಬ ನಿನ್ನ ಬಯಕೆಯು ಈಡೇರುವವರೆಗೂ ನಿನ್ನಲ್ಲಿರುವ ಪತಿವ್ರತಾಗುಣದಿಂದ ದೊಡ್ಡ ದೊಡ್ಡ ಮುನಿಗಳ ಸೇವೆಯನ್ನು ಮಾಡುತ್ತ, ಅವರನ್ನು ಒಲಿಸಿಕೊ;

ದಿಗಂತ=ದಿಕ್ಕಿನ ಕೊನೆ; ವಿಶ್ರಾಂತ=ನೆಲೆ; ಯಶರ್+ಕಳ್+ಅಮ್; ಯಶ=ಕೀರ್ತಿ; ಯಶರ್=ಕೀರ್ತಿವಂತರು; ಕಳ್=ಗಳು; ವರ=ಒಳ್ಳೆಯವರಾದ; ತನೂಭವರ್+ಅನ್; ತನೂಭವ=ಮಗ;

**ದಿಗಂತ ವಿಶ್ರಾಂತ ಯಶರ್ಕಳಮ್ ವರ ತನೂಭವರನ್ ನೀನ್ ಪಡೆ**= ದಿಕ್ಕಿನ ಕೊನೆಯವರೆಗೂ ಹಬ್ಬುವಂತಹ ಅಂದರೆ ಜಗತ್ತಿನಲ್ಲಿಯೇ ಕೀರ್ತಿವಂತರಾದ ಒಳ್ಳೆಯ ಮಕ್ಕಳನ್ನು ನೀನು ಪಡೆಯುವಂತವಳಾಗು;

ಎನ್ನ=ನನ್ನ; ಕನ್ನಿಕೆ=ಹದಿಹರೆಯದ ಪ್ರಾಯದ ಹೆಣ್ಣು/ಕುಮಾರಿ; ಬಳೆ+ಅಂದು; ಬಳೆ=ಬೆಳೆ; ಅಂದು=ಆಗ; ಬಳೆವಂದು=ಬೆಳೆಯುವಾಗ;

**ಎನ್ನ ಕನ್ನಿಕೆಯಾ ಕಾಲದೊಳ್ ನಾನ್ ಎನ್ನ ಮಾವನ್ ಕೊಂತಿಭೋಜನ ಮನೆಯೊಳ್ ಬಳೆವಂದು**=ನನ್ನ ಪ್ರಾಯದ ಕಾಲದಲ್ಲಿ ನನ್ನ ಮಾವನಾದ ಕುಂತಿಭೋಜನ ಮನೆಯಲ್ಲಿ ನಾನು ಬೆಳೆಯುತ್ತಿದ್ದಾಗ;

ಮಹಾಮುನಿ+ಅರ್; ಮಹಾಮುನಿ=ದೊಡ್ಡ ರಿಸಿ; ಎಮ್ಮ=ನಮ್ಮ; ನಿಚ್ಚ+ಕ್ಕೆ+ಅಮ್; ನಿಚ್ಚ=ಪ್ರತಿನಿತ್ಯ/ಯಾವಾಗಲೂ; ಬರ್ಪರ್=ಬರುತ್ತಿದ್ದರು;

**ದುರ್ವಾಸ ಮಹಾಮುನಿಯರ್ ಎಮ್ಮ ಮನೆಗೆ ನಿಚ್ಚಕ್ಕಮ್ ಬರ್ಪರ್**=ದೊಡ್ಡ ಮುನಿಗಳಾದ ದುರ್ವಾಸರು ಪ್ರತಿನಿತ್ಯವೂ ನಮ್ಮ ಮನೆಗೆ ಬರುತ್ತಿದ್ದರು;

ವಿನಯ+ಕ್ಕೆ+ಅಮ್; ವಿನಯ=ಗುರುಹಿರಿಯರನ್ನು ಒಲವು ನಲಿವುಗಳಿಂದ ಕಾಣುವ ಮತ್ತು ಉಪಚರಿಸುವ ಗುಣ; ಭಕ್ತಿ+ಗೆ+ಅಮ್; ಭಕ್ತಿ=ದೇವರಲ್ಲಿ ಮತ್ತು ಗುರುಹಿರಿಯರಲ್ಲಿ ಇಟ್ಟಿರುವ ನಂಬಿಕೆ; ಬೆಸಕೆಯ್=ಹೇಳಿದ ಕೆಲಸವನ್ನು ಮಾಡು; ಬೆಸಕೆಯ್ವುದರ್ಕಮ್=ನನಗೆ ವಹಿಸಿದ್ದ ಕೆಲಸವನ್ನು ಮಾಡುತ್ತಿರುವುದಕ್ಕೆ; ಮೆಚ್ಚಿ=ನೋಡಿ ಆನಂದಗೊಂಡು;

**ಅವರ್ ಎನ್ನ ವಿನಯಕ್ಕಮ್ ಭಕ್ತಿಗಮ್ ಬೆಸಕೆಯ್ವುದರ್ಕಮ್ ಮೆಚ್ಚಿ**=ನಾನು ವಿನಯ ಮತ್ತು ಆದರದಿಂದ ಮಾಡುತ್ತಿದ್ದ ಸೇವೆಯನ್ನು ಕಂಡು ಮೆಚ್ಚಿಕೊಂಡ ದುರ್ವಾಸ ಮುನಿಗಳು;

ಮಂತ್ರ+ಅಕ್ಷರಮ್+ಗಳ್+ಅನ್; ಮಂತ್ರ=ವ್ಯಕ್ತಿಯು ತನ್ನ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ದೇವತೆಯ ಮಹಿಮೆಯನ್ನು ಕೊಂಡಾಡುವಾಗ ಉಚ್ಚರಿಸುವಂತಹ ನುಡಿ; ಅಕ್ಷರ=ಉಚ್ಚಾರಣೆಯ ದನಿ ಮತ್ತು ಬರಹದ ಲಿಪಿ; ಅನ್=ಅನ್ನು; ವರ+ಇತ್ತರ್; ವರ=ಕೊಡುಗೆ; ಇತ್ತರ್=ನೀಡಿದರು;

**ಮಂತ್ರಾಕ್ಷರಂಗಳನ್ ಅಯ್ದಮ್ ವರವಿತ್ತರ್**=ಅಯ್ದು ಮಂತ್ರಾಕ್ಷರಗಳನ್ನು ವರವಾಗಿ ನೀಡಿದರು;

ಬಗೆ=ಮನಸ್ಸು/ಬಯಕೆ; ಆಹ್ವಾನ=ಕರೆಯುವಿಕೆ; ಗೆಯ್=ಮಾಡು;

**ಈ ಅಯ್ದು ಮಂತ್ರಕೆ ನಿನ್ನ ಬಗೆಗೆ ಬಂದವರನ್ ಆಹ್ವಾನಮ್ ಗೆಯ್ಯಲ್**= ಈ ಅಯ್ದು ಮಂತ್ರಗಳಿಂದ ನಿನ್ನ ಮನಸ್ಸಿಗೆ ಬಂದವರನ್ನು ಕರೆದರೆ;

ಪೋಲ್ವೆಯ=ಹೋಲಿಕೆಯ; ಅಯ್ವರ್=ಅಯ್ದು ಮಂದಿ; ಬೆಸಸು=ಅಪ್ಪಣೆ ಮಾಡು/ ಆದೇಶ ನೀಡು;

**ಅವರ ಪೋಲ್ವೆಯ ಅಯ್ವರ್ ಮಕ್ಕಳನ್ ಪಡೆವೆ ಎಂದು ಬೆಸಸಿದೊಡೆ**= ಅವರನ್ನೇ ಹೋಲುವ ಅಯ್ದು ಮಕ್ಕಳನ್ನು ಪಡೆಯುತ್ತೀಯೆ ಎಂದು ಆದೇಶ ನೀಡಿದರು;

ಪುಣ್ಯ=ವ್ಯಕ್ತಿಯು ಮಾಡುವ ಒಳ್ಳೆಯ ಕೆಲಸಗಳಿಂದ ಜೀವನದಲ್ಲಿ ದೊರೆಯುವ ನಲಿವು ನೆಮ್ಮದಿ; ಒಳ್ಳಿತ್ತು=ಒಳ್ಳೆಯದು; ದೊರೆ=ಸಿಗು/ಕಾಣು/ತೋರು; ದೊರೆಕೊಳ್= ಸಿಗುವುದು/ಈಡೇರುವುದು;

**ಈಗಳ್ ಎನ್ನ ಪುಣ್ಯದಿನ್ ಒಳ್ಳಿತ್ತು ದೊರೆಕೊಂಡುದು** = ಆಗ ನಾನು ಮುನಿಗಳ ಸೇವೆಯನ್ನು ಮಾಡಿ ಪಡೆದಿದ್ದ ಪುಣ್ಯದಿಂದ ಈಗ ನನಗೆ ಒಳ್ಳೆಯದು ದೊರಕುವಂತಾಯಿತು;

ಅದರ್ಕೆ=ಅದಕ್ಕಾಗಿ; ಏನುಮ್=ಯಾವುದನ್ನು; ಚಿಂತಿಸಲ್+ಬೇಡ;

**ಅದರ್ಕೆ ಏನುಮ್ ಚಿಂತಿಸಲ್ವೇಡ**=ಮಕ್ಕಳಿಲ್ಲವೆಂಬ ಕಾರಣಕ್ಕಾಗಿ ಇನ್ನು ಮುಂದೆ ಚಿಂತಿಸಬೇಡ;

ವಾಕ್ಯ=ನುಡಿ/ಮಾತು; ಅಮೋಘ=ತುಂಬಾ ಬೆಲೆಯುಳ್ಳ/ಅತಿಶಯವಾದ; ಅಕ್ಕುಮ್=ಆಗಿವೆ;

**ದಿವ್ಯ ಮುನಿ ವಾಕ್ಯಮ್ ಅಮೋಘ ವಾಕ್ಯಮ್ ಅಕ್ಕುಮ್**=ದಿವ್ಯ ಮುನಿಯ ನುಡಿಗಳು ತುಂಬಾ ಬೆಲೆಯುಳ್ಳ ನುಡಿಗಳಾಗಿವೆ. ಅವರು ಹೇಳಿದಂತೆಯೇ ಮಂತ್ರಗಳನ್ನು ಉಚ್ಚರಿಸಿ ಮಕ್ಕಳನ್ನು ಪಡೆಯಬೇಕೆಂಬ ನಿನ್ನ ಬಯಕೆಯನ್ನು ಈಡೇರಿಸಿಕೊ;

ಅಂತೆ=ಹಾಗೇಯೇ ; ಗೆಯ್=ಮಾಡು;

**ಅಂತೆ ಗೆಯ್ವೆನ್ ಎಂದು**=ಮುನಿಗಳು ಹೇಳಿದಂತೆಯೇ ಮಾಡುತ್ತೇನೆ ಎಂದು ಪಾಂಡುರಾಜನಿಗೆ ಹೇಳಿ;

ಸರೋಜ+ಆನನೆ; ಸರೋಜ=ತಾವರೆ; ಆನನ=ಮೊಗ; ಸರೋಜಾನನೆ= ತಾವರೆಮೊಗದವಳು/ಸುಂದರಿ; ತೀರ್ಥ+ಜಲಮ್+ಗಳ್; ತೀರ್ಥ=ದೇವರನ್ನು ಪೂಜಿಸದ ನಂತರ ಪೂಜಾರಿಯು ಜನರಿಗೆ ನೀಡುವ ನೀರು. ಇದನ್ನು ಕುಡಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯ ಜನಮನದಲ್ಲಿದೆ/ದೇವಾಲಯಗಳು ಇರುವ ಪವಿತ್ರವಾದ ಜಾಗ; ತೀರ್ಥಜಲ=ದೇಗುಲಗಳ ಬಳಿ ಹರಿಯುವ ನದಿ ತೊರೆ ಹೊಳೆಗಳು. ಇಲ್ಲಿ ಸ್ನಾನ ಮಾಡಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯು ಜನಮನದಲ್ಲಿದೆ; ಮೀ=ಸ್ನಾನ ಮಾಡು; ಮಿಂದು=ಸ್ನಾನ ಮಾಡಿ; ದಳಿಂಬ+ಅನ್; ದಳಿಂಬ=ಮಡಿಯಾದ ಬಟ್ಟೆ; ತೊಡಿಗೆ+ಗಳ್+ಅನ್; ತೊಡಿಗೆ=ಒಡವೆ; ದರ್ಭ+ಶಯನ+ಒಳ್; ದರ್ಭ=ಒಂದು ಬಗೆಯ ಹುಲ್ಲು; ಶಯನ=ಮೆತ್ತೆ/ಮಂಚ; ಇರ್ದು=ಇದ್ದು;

**ಸರೋಜಾನನೆ ತೀರ್ಥಜಲಂಗಳಮ್ ಮಿಂದು ದಳಿಂಬವನ್ ಉಟ್ಟು ಮುತ್ತಿನ ತೊಡಿಗೆಗಳನ್ ತೊಟ್ಟು ದರ್ಭಶಯನದೊಳ್ ಇರ್ದು**=ಸುಂದರಿಯಾದ ಕುಂತಿಯು ತಾನು ಪವಿತ್ರವೆಂದು ನಂಬಿರುವ ನದಿ ತೊರೆ ಹೊಳೆಗಳಲ್ಲಿ ಸ್ನಾನವನ್ನು ಮಾಡಿ, ಮಡಿ ಬಟ್ಟೆಯನ್ನುಟ್ಟು, ಮುತ್ತಿನ ಒಡವೆಗಳನ್ನು ತೊಟ್ಟು ಹುಲ್ಲಿನ ಮೆತ್ತೆಯ ಮೇಲೆ ಕುಳಿತುಕೊಂಡು;

ಸಂತಾನಮ್+ಅನ್; ಮಂತ್ರ ಸಂತಾನ=ದುರ್ವಾಸ ಮುನಿಯು ಕುಂತಿಯು ಮಕ್ಕಳನ್ನು ಪಡೆಯುವುದಕ್ಕಾಗಿ ಹೇಳಿಕೊಟ್ಟಿರುವ ಮಂತ್ರ; ಜ್ಞಾನ+ಇನ್; ಜ್ಞಾನ=ಎಚ್ಚರ; ಇರ್ದು=ಇದ್ದು; ನಿಟ್ಟಿಸು=ಎದುರು ನೋಡು;

**ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂತಾನಮನ್ ಓದಿ ಓದಿ ಜ್ಞಾನದಿನ್ ಇರ್ದು ನಿಟ್ಟಿಪೊಡೆ**=ಮಕ್ಕಳನ್ನು ಪಡೆಯಲೆಂದು ದುರ್ವಾಸ ಮುನಿಯು ಹೇಳಿಕೊಟ್ಟಿರುವ

ಮಂತ್ರದಲ್ಲಿನ ದೇವತೆಯನ್ನು ಹೆಸರನ್ನು ಉಚ್ಚರಿಸಿ ಕರೆಯುತ್ತ ಎಚ್ಚರದಿಂದ ಕೂಡಿದವಳಾಗಿ ದೇವತೆಯ ಆಗಮನವನ್ನು ಎದುರುನೋಡುತ್ತಿರಲು;

ಯಮರಾಜನ್+ಅನ್; ಯಮರಾಜ=ಒಬ್ಬ ದೇವತೆ. ಈ ಪ್ರಪಂಚದಲ್ಲಿರುವ ಸಕಲ ಜೀವಿಗಳ ಪ್ರಾಣವನ್ನು ಮತ್ತೊಂದು ಲೋಕಕ್ಕೆ ಕೊಂಡೊಯ್ಯುವಂತಹ ಒಬ್ಬ ದೇವತೆಯನ್ನು ನಮ್ಮ ಜನಸಮುದಾಯ ಕಲ್ಪಿಸಿಕೊಂಡಿದೆ; ಅದ್ಭುತ=ಅಚ್ಚರಿಯನ್ನುಂಟು ಮಾಡುವ; ತೇಜ=ಕಾಂತಿ/ಶಕ್ತಿ; ತೇಜನ್=ಶಕ್ತಿಯುಳ್ಳವನು/ಕಾಂತಿಯುಳ್ಳವನು; ಜಾನ+ಇಮ್; ಜಾನ=ದೇವತೆಯ ನಾಮಸ್ಮರಣೆ; ಬರಿಸೆ=ಕರೆಸಲು;

**ಯಮರಾಜನನ್ ಅದ್ಭುತ ತೇಜನನ್ ಜಾನದಿಮ್ ಬರಿಸೆ**=ಕುಂತಿಯು ಯಮರಾಜನ ನಾಮಸ್ಮರಣೆಯನ್ನು ಮಾಡುತ್ತ, ಆತನನ್ನು ಬರಮಾಡಿಕೊಂಡಳು;

ಆತ್ಮ+ಅನುಗತ+ಅರ್ಥಮ್; ಆತ್ಮ=ಮನಸ್ಸು; ಅನುಗತ=ಹೊಂದಿರುವ; ಅರ್ಥ=ಬೇಡಿಕೆ/ಉದ್ದೇಶ/ಕೋರಿಕೆ; ಬೆಸ=ಕೆಲಸ/ಕಾರ್ಯ; ಆವುದು=ಯಾವುದು;

**ಯಮನ್ ಬಂದು ಆತ್ಮಾನುಗತಾರ್ಥಮ್ ಬೆಸನ್ ಆವುದು**=ಯಮನು ಕುಂತಿಯ ಬಳಿಗೆ ಬಂದು ನಿನ್ನ ಮನಸ್ಸಿನಲ್ಲಿರುವ ಬೇಡಿಕೆಯು ಯಾವುದು... ನನ್ನಿಂದ ಆಗಬೇಕಾದ ಕಾರ್ಯವೇನು ಎಂದು ಕೇಳಲು;

ನಿನ್ನನೆ=ನಿನ್ನನ್ನೇ; ಪೋಲ್ವ=ಹೋಲುವ; ಪುತ್ರನ್+ಅನ್; ಪುತ್ರ=ಮಗ; ಎನಗೆ=ನನಗೆ; ಈ=ಕೊಡು; ಈವುದು=ಕೊಡುವುದು;

**ನಿನ್ನನೆ ಪೋಲ್ವ ಪುತ್ರನನ್ ಎನಗೆ ಈವುದು**=ನಿನ್ನನ್ನೇ ಹೋಲುವ ಮಗನನ್ನು ನನಗೆ ಕೊಡು;

ತಥಾಸ್ತು=ಹಾಗೆಯೇ ಆಗಲಿ; ಭಟ್ಟಾರಕ=ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಒಲವು ನಲಿವು ಆದರ ಸೂಚಕವಾಗಿ ಸೇರುವ ಪದ; ಅಂಶಮ್+ಅನ್; ಅಂಶ=ತನ್ನ ತೇಜಸ್ಸಿನ ಭಾಗವನ್ನು; ಗರ್ಭ+ಒಳ್; ಗರ್ಭ=ಬಸಿರು; ಅವತರಿಸಿ= ಇಳಿಯಬಿಟ್ಟು; ಅಂತರ್ಧಾನ=ಮಾಯವಾಗುವುದು; ಸಲ್=ಹೋಗು; ಸಂದನ್= ಹೋದನು;

**ತಥಾಸ್ತು ಎಂದು ಯಮಭಟ್ಟಾರಕನ್ ತನ್ನ ಅಂಶಮನ್ ಆಕೆಯ ಗರ್ಭದೊಳ್ ಅವತರಿಸಿ ಅಂತರ್ಧಾನಕ್ಕೆ ಸಂದನ್**=ಕುಂತಿಯ ಬೇಡಿಕೆಯನ್ನು ಒಪ್ಪಿಕೊಂಡು ಪೂಜ್ಯನಾದ ಯಮನು ತನ್ನ ಅಂಶವನ್ನು ಆಕೆಯ ಬಸಿರಿನಲ್ಲಿ ಇಳಿಸಿ ತನ್ನ ಲೋಕಕ್ಕೆ ತೆರಳಿದನು.

✦

# ಕುಂತಿಯ ಬಯಕೆ
## ಪಂಪ ಭಾರತ ಪದ್ಯ–ಪ್ರಥಮಾಶ್ವಾಸ

ವ॥ ಈ ತಪೋವನಮೆ ಪಾವನಮೆಂದು ತಪೋವನದ ಮುನಿಜನದ ಪರಮಾನುರಾಗಮಂ ಪೆರ್ಚಿಸಿ ಕಾಮಾನುರಾಗಮಂ ಬೆರ್ಚಿಸಿ ತದಾಶ್ರಮದೊಳಾಶ್ರಮಕ್ಕೆ ಗುರುವಾಗೆ ಪಾಂಡುರಾಜನಿರ್ಪನ್ನೆಗಮಿತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳೆಂಬುದಂ ಕುಂತಿ ಕೇಳ್ದು ತಾನುಂ ಪುತ್ರಾರ್ಥಿನಿಯಾಗಲ್ ಬಗೆದು–

**ಚಂ॥ ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಮರ್ಥಿಗರ್ಥಮಂ**
**ಕಸವಿನ ಲೆಕ್ಕಮೆಂದು ಕುಡಲುಂ ವಿಪುಳಾಯತಿಯಂ ದಿಗಂತದೊಳ್**
**ಪಸರಿಸಲುಂ ಕರಂ ನೆಱೆವ ಮಕ್ಕಳನೀಯದೆ ನೋಡೆ ನಾಡೆ ನೋ**
**ಯಸಿದಪುದಿಕ್ಷುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ. ॥117॥**

ವ॥ ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯಂ ಕಂಡು ಪಾಂಡುರಾಜನೇಕಾಂತದೊಳಿಂತೆಂದಂ–

**ಉ॥ ಚಿಂತೆಯಿದೇನೊ ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡಿ**
**ನ್ನಿಂತಿರವೇಡ ದಿವ್ಯ ಮುನಿಪುಂಗವರಂ ಬಗೆದೀರ್ಪಿನಂ ನಿಜಾ**
**ತ್ಯಂತ ಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ ದಿಗಂತ ವಿ**
**ಶ್ರಾಂತ ಯಶರ್ಕಳಂ ವರ ತನೂಭವರಂ ಪಡೆ ನೀಂ ತಳೋದರೀ ॥118॥**

ವ॥ ಎಂದೊಡೆ ಕೊಂತಿಯಿಂತೆಂದಳೆನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸ ಮಹಾಮುನಿಯರೆಮ್ಮ ಮನೆಗೆ ನಿಚ್ಚಕ್ಕಂ ಬರ್ಪರವರೆನ್ನ ವಿನಯಕ್ಕಂ ಭಕ್ತಿಗಂ ಬೆಸಕೆಯ್ವುದರ್ಕಂ ಮೆಚ್ಚಿ ಮಂತ್ರಾಕ್ಷರಂಗಳನಯ್ದಂ ವರವಿತ್ತರೀಯಯ್ದು

ಮಂತ್ರಕಯ್ವರ್ಮಕ್ಕಳಂ ನಿನ್ನ ಬಗೆಗೆ ಬಂದವರನಾಹ್ವಾನಂ ಗೆಯ್ಯಲವರ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೀಗಳೆನ್ನ ಪುಣ್ಯದಿಂ ದೊರೆಕೊಂಡುದೊಳ್ಳಿತ್ತೆಂಬುದಂ ದಿವ್ಯಮುನಿವಾಕ್ಯಮಮೋಘವಾಕ್ಯಮಕ್ಕುಮದರ್ಕೇನುಂ ಚಿಂತಿಸಲ್ವೇಡೆಂದೊಡಂತೆ ಗೆಯ್ವೆನೆಂದು ತೀರ್ಥಜಲಂಗಳಂ ಮಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು-

**ಉ॥ ಜ್ಞಾನದಿನಿರ್ದು ನಿಟ್ಟಿಪೊಡೆ ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂ**
**ತಾನಮನೋದಿಯೋದಿ ಯಮರಾಜನನದ್ಭುತತೇಜನಂ ಸರೋ**
**ಜಾನನೆ ಜಾನದಿಂ ಬರಿಸೆ ಬಂದು ಯಮಂ ಬೆಸನಾವುದಾವುದಾ**
**ತ್ಮಾನುಗತಾರ್ಥಮೆಂದೊಡನಗೀವುದು ನಿನ್ನನೆ ಪೋಲ್ವ ಪುತ್ರನಂ ॥119॥**

ವ॥ ಎಂಬುದುಂ ತಥಾಸ್ತುವೆಂದು ತನ್ನಂಶಮನಾಕೆಯ ಗರ್ಭದೊಳವತರಿಸಿ ಯಮಭಟ್ಟಾರಕನಂತರ್ಧಾನಕ್ಕೆ ಸಂದನ್.



## ೮. ಗಾಂಧಾರಿಯ ಆತಂಕ

### ಪಾತ್ರಗಳು

**ಗಾಂಧಾರಿ:** ಹಸ್ತಿನಾವತಿಯ ರಾಜನಾದ ಧೃತರಾಷ್ಟ್ರನ ಹೆಂಡತಿ. ಪಟ್ಟದ ರಾಣಿ

**ಧೃತರಾಷ್ಟ್ರ:** ಹಸ್ತಿನಾವತಿಯ ರಾಜ.

**ವ್ಯಾಸ:** ಒಬ್ಬ ಮುನಿ. ಪರಾಶರ ಮುನಿ ಮತ್ತು ಯೋಜನಗಂಧಿಯ ಮಗ.

**ವಿದುರ:** ಅಂಬಿಕೆಯ ದಾಸಿ ಮತ್ತು ವ್ಯಾಸನ ಮಗ.

**ದುರ್ಯೋಧನ:** ಧೃತರಾಷ್ಟ್ರ ಮತ್ತು ಗಾಂಧಾರಿಯ ಹಿರಿಯ ಮಗ.

**ದುಶ್ಶಾಸನ:** ದುರ್ಯೋಧನನ ತಮ್ಮ.

## ಗಾಂಧಾರಿಯ ಆತಂಕ

ಭರತಕುಲತಿಲಕರಪ್ಪ ಇರ್ವರ್ ಮಕ್ಕಳನ್ ಪೆತ್ತು ಕೊಂತಿ ಸಂತಸದ ಅಂತಮನ್ ಎಯ್ದಿ ಇರ್ಪುದುಮ್, ಅತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಮ್ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ–

ಗಾಂಧಾರಿ: (ತನ್ನಲ್ಲಿಯೇ)

**ಸಂತತಿಗೆ ಪಿರಿಯ ಮಕ್ಕಳನ್ ಆನ್ ತಡೆಯದೆ ಪಡೆವೆನ್ ಎಂದೊಡೆ, ಎನ್ನಿಮ್ ಮುನ್ನಮ್ ಕೊಂತಿಯೆ ಪಡೆದಳ್. ಗರ್ಭದ ಚಿಂತೆಯದು ಇನ್ನೇವುದು...**

(ಎಂದು ಬಸಿಱಮ್ ಪೊಸೆದಳ್. ಅಸುರರ್ ಪಾಲ್ಗಡಲಮ್ ಮಗುಳ್ದು ಪೊಸೆದೊಡೆ, ಪೊಸೆದಲ್ಲಿ ಕಾಳಕೂಟ ಅಂಕುರಮ್ ಅಸದಳಮ್ ಒಗೆದಂತೆ ಬಸಿಱಿಮ್ ನೂಱೊಂದು ಅರುಣಾಕೀರ್ಣಮ್ ಪಿಂಡಮ್ ಅಂದು ಒಗೆದುವು. ಅವಮ್ ಕಂಡು ಕಿನಿಸಿ ಕಿರ್ಚೆಟ್ಟು..)

ಗಾಂಧಾರಿ: **ಅವೆಲ್ಲವಮ್ ಪೊಱಗೆ ಬಿಸುಟು ಬನ್ನಿಮ್**

(ಎಂಬುದುಮ್ ವ್ಯಾಸಭಟ್ಟಾರಕನ್ ಬಂದು ಗಾಂಧಾರಿಯನ್ ಬಗ್ಗಿಸಿ..)

ವ್ಯಾಸ: **ಒಂದೆ ಗರ್ಭದೊಳ್ ನಿನ್ನ ಸಂತತಿಗೆ ನೂರ್ವರ್ ಉದಗ್ರ ಸುತರ್ಕಳ್ ಒದವುಗೆ ಎನೆ, ಕೆಮ್ಮನೆ ಇಂತು ಪೊಸೆದು ಇಕ್ಕಿದೆ. ಪೊಲ್ಲದು ಗೆಯ್ದೆ.**

(ಎಂದು ಮುನಿ ಮಾಣದೆ ಸೃಷ್ಟಿಗೆ ಚೋದ್ಯಮ್ ಅಪ್ಪಿನಮ್ ನೂಱು ಪಿಂಡಮುಮನ್ ಆಗಳೆ ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡಗಿ ಇಟ್ಟೊಡೆ, ಅಂತು ನೂರ್ವರೊಳ್ ಒರ್ವನ ಅಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣ ವಯಸ್ಕನಾಗಿ ಘೃತಘಟವಿಘಟನು ಮಾಗೆ ಪುಟ್ಟುವುದುಮ್...

ಪ್ರತಿಮೆಗಳ್ ಅೞ್ತುವು, ಧಾತ್ರಿ ಅತಿ ರಭಸದೆ ಮೊೞಗಿದುದು. ದೆಸೆಗಳ್

ಉರಿದುವು, ಭೂತ ಪ್ರತತಿಗಳ್ ಆಡಿದುವು. ಶಿವಾ ನಿವಹಂಗಳ್ ಅತಿ ರಮ್ಯಸ್ಥಾನದೊಳ್ ಒಳಱಿದುವು. ಅಂತು ಒಗೆದ ಅನೇಕ ಉತ್ಪಾತಂಗಳಮ್ ಕಂಡು ಮುಂದಱಿವ ಚದುರ ವಿದುರನ್ ಇಂತು ಎಂದನ್...)

ವಿದುರ: **ಆನ್ ಅಱಿವೆನ್. ದಲ್, ಈತನೆ ನಮ್ಮ ಕುಲಕ್ಕಮ್ ಕೇತು. ಅಲ್ಲದಂದು ಏಕೆ ಇನಿತು ಉತ್ಪಾತಮ್ ತೋರ್ಪುವು. ಈತನ ಪೆಱಗೆ ಬಿಸುಡುವುದು. ಉೞಿದ ಸುತರೆ ಸಂತತಿಗೆ ಅಪ್ಪರ್.**

(ಎಂದೊಡಮ್ ಪುತ್ರಮೋಹ ಕಾರಣಮಾಗಿ ಧೃತರಾಷ್ಟ್ರನುಮ್ ಗಾಂಧಾರಿಯುಮ್ ಏಗೆಯ್ದುಮ್ ಒಡಂಬಡದೆ ಇರ್ದೊಡೆ, ಮಹಾ ಬ್ರಾಹ್ಮಣರಿಂದಮ್ ಉತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಮ್ ಬಳೆಯಿಸಿ. ಬದ್ದವಣಮಮ್ ಬಾಜಿಸಿ ಮಂಗಳಮಮ್ ಪಾಡಿಸಿ, ಕೂಸಿಂಗೆ ದುರ್ಯೋಧನನೆಂದು ಪೆಸರನ್ ಇಟ್ಟು, ಮತ್ತಿನ ಕೂಸುಗಳ್ಗೆಲ್ಲಮ್ ದುಶ್ಶಾಸನ ಆದಿಯಾಗಿ ನಾಮಂಗಳನ್ ಇಟ್ಟು ಪರಕೆಯಮ್ ಕೊಟ್ಟು ಸುಕಮ್ ಇರ್ಪಿನೆಗಮ್...)

✦

## ಗಾಂಧಾರಿಯ ಆತಂಕ
## ಪದ ವಿಂಗಡಣೆ ಮತ್ತು ತಿರುಳು

ಭರತ+ಕುಲ+ತಿಲಕರ್+ಅಪ್ಪ; ಕುಲ=ವಂಶ/ಮನೆತನ; ತಿಲಕ=ಹಣೆಯ ಮೇಲೆ ಇಟ್ಟುಕೊಳ್ಳುವ ಕುಂಕುಮ ಇಲ್ಲವೇ ಇನ್ನಿತರ ವಸ್ತುಗಳ ಬೊಟ್ಟು; ಕುಲತಿಲಕ=ತಾನು ಹುಟ್ಟಿರುವ ಮನೆತನಕ್ಕೆ ಒಳ್ಳೆಯ ಹೆಸರನ್ನು ತಂದಿರುವ/ತರುವ ವ್ಯಕ್ತಿ; ಅಪ್ಪ=ಆಗಿರುವ; ಇರ್ವರ್=ಇಬ್ಬರು; ಇರ್ವರ್ ಮಕ್ಕಳು=ಧರ್ಮರಾಯ ಮತ್ತು ಭೀಮನೆಂಬ ಇಬ್ಬರು ಮಕ್ಕಳನ್ನು;

ಪೆತ್ತು=ಹೆತ್ತು/ಹಡೆದು; ಸಂತಸ=ಹಿಗ್ಗು; ಅಂತಮ್+ಅನ್; ಅಂತ=ತುತ್ತುತುದಿ/ಕೊನೆ; ಎಯ್=ಪಡೆ/ಹೊಂದು; ಇರ್ಪುದುಮ್=ಇರಲು;

**ಭರತಕುಲತಿಲಕರಪ್ಪ ಇರ್ವರ್ ಮಕ್ಕಳನ್ ಪೆತ್ತು ಕೊಂತಿ ಸಂತಸದ ಅಂತಮನ್ ಎಯ್ದಿ ಇರ್ಪುದುಮ್**=ಭರತ ಕುಲಕ್ಕೆ ಕೀರ್ತಿಯನ್ನು ತರುವಂತಹ ಧರ್ಮರಾಯ ಮತ್ತು ಭೀಮನೆಂಬ ಇಬ್ಬರು ಮಕ್ಕಳನ್ನು ಹಡೆದು ಕುಂತಿಯು ಆನಂದದ ತುತ್ತತುದಿಯಲ್ಲಿರಲು ಅಂದರೆ ಒಲವು ನಲಿವು ನೆಮ್ಮದಿಯಿಂದ ಕಾಡಿನಲ್ಲಿ ಬಾಳುತ್ತಿರಲು;

ಅತ್ತ=ಆ ಕಡೆ/ಹಸ್ತಿನಾವತಿಯಲ್ಲಿ; ಮಹಾದೇವಿ+ಅಪ್ಪ; ಮಹಾದೇವಿ=ಪಟ್ಟದ ರಾಣಿ; ಅಪ್ಪ=ಆಗಿರುವ; ಗರ್ಭ=ಬಸಿರು; ತಡೆ=ವಿಳಂಬವಾಗು/ತಡವಾಗು; ಗರ್ಭಮ್ ತಡೆದುದರ್ಕೆ=ಹೆರಿಗೆಯಾಗಲು ತಡವಾದುದಕ್ಕೆ; ಕಿನಿಸು=ಕೋಪ; ಕಿಂಕಿರಿ+ಪೋಗಿ; ಕಿಂಕಿರಿ=ಕಳವಳ/ತಳಮಳ; ಪೋಗು=ಹೋಗು;

**ಅತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಮ್ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ**=ಅತ್ತ ಹಸ್ತಿನಾವತಿಯಲ್ಲಿ ಧೃತರಾಷ್ಟ್ರನ ಮಡದಿಯೂ ಪಟ್ಟದ ರಾಣಿಯೂ ಆದ ಗಾಂಧಾರಿಯು ಕುಂತಿಗೆ ಮಕ್ಕಳಾದ ಸುದ್ದಿಯನ್ನು ಕೇಳಿ, ಅವಳಿಗಿಂತ ಮುಂಚಿತವಾಗಿ ತನಗೆ ಹೆರಿಗೆಯಾಗಲಿಲ್ಲವೆಂಬ ಹತಾಶೆಯಿಂದ ಕೋಪಗೊಂಡು ತಳಮಳಕ್ಕೆ ಒಳಗಾಗಿ;

ಸಂತತಿ=ಮನೆತನ/ವಂಶ; ಪಿರಿಯ=ಹಿರಿಯ; ಆನ್=ನಾನು; ತಡೆಯದೆ=ತಡಮಾಡದೆ; ಪಡೆವೆನ್=ಹಡೆಯುತ್ತೇನೆ/ಹೆರುತ್ತೇನೆ; ಎಂದೊಡೆ=ಎಂದುಕೊಂಡಿದ್ದರೆ; ಎನ್ನಿಮ್=ನನಗಿಂತ; ಮುನ್ನಮ್=ಮೊದಲೇ;

**ಸಂತತಿಗೆ ಪಿರಿಯ ಮಕ್ಕಳನ್ ಆನ್ ತಡೆಯದೆ ಪಡೆವೆನ್ ಎಂದೊಡೆ, ಎನ್ನಿಮ್ ಮುನ್ನಮ್ ಕೊಂತಿಯೆ ಪಡೆದಳ್**=ರಾಜ್ಯದ ಪಟ್ಟಕ್ಕೆ ಹಕ್ಕನ್ನು ಹೊಂದುವ ಹಿರಿಯ ಮಕ್ಕಳನ್ನು ಯಾವ ಅಡ್ಡಿಯೂ ಇಲ್ಲದೆ ನಾನೇ ಮೊದಲು ಹಡೆಯುತ್ತೇನೆ ಎಂದುಕೊಂಡಿದ್ದರೆ, ನನಗಿಂತ ಮೊದಲೇ ಕುಂತಿಯು ಮಕ್ಕಳನ್ನು ಹೆತ್ತಳು;

ಗರ್ಭ=ಬಸಿರು; ಚಿಂತೆ+ಅದು; ಚಿಂತೆ=ಯೋಚನೆ; ಇನ್ನು+ಏವುದು; ಏವುದು=ಯಾವುದು; ಬಸಿಱನ್/ಬಸಿರನ್=ತುಂಬು ಬಸರಿಯಾಗಿದ್ದ ಗಾಂಧಾರಿಯು ತನ್ನ ಹೊಟ್ಟೆಯನ್ನು; ಪೊಸೆ=ಹಿಸುಕು;

**ಗರ್ಭದ ಚಿಂತೆಯದು ಇನ್ನೇವುದು ಎಂದು ಬಸಿಱಮ್ ಪೊಸೆದಳ್**=ನನ್ನ ಬಸಿರಿನ ಬಗ್ಗೆ ಇನ್ನೇನು ತಾನೆ ಚಿಂತಿಸಲಿ. ಅಂದರೆ ಹುಟ್ಟಿನಲ್ಲಿ ಹಿರಿಯತನವನ್ನು ಕಳೆದುಕೊಳ್ಳುವ ನನ್ನ ಮಕ್ಕಳಿಗೆ ರಾಜ್ಯದ ಪಟ್ಟ ದೊರೆಯುವುದಿಲ್ಲ ಎಂಬ ಸಂಕಟದಿಂದ ತುಂಬು ಬಸರಿಯಾಗಿದ್ದ ಗಾಂಧಾರಿಯು ತನ್ನ ಹೊಟ್ಟೆಯನ್ನು ಬಲವಾಗಿ ಹಿಸುಕಿದಳು;

ಅಸುರ+ಅರ್; ಅಸುರ=ರಕ್ಕಸ; ಪಾಲ್+ಕಡಲ್+ಅಮ್; ಪಾಲ್=ಹಾಲು; ಕಡಲ್=ಸಾಗರ; ಅಮ್=ಅನ್ನು; ಮಗುೞ್=ಮತ್ತೊಮ್ಮೆ; ಪೊಸೆ=ಕದಡು/ಕಲಕು/ಕಡೆ; ಪೊಸೆದೊಡೆ=ಕಡೆದರೆ;

**ಅಸುರರ್ ಪಾಲ್ಗಡಲಮ್ ಮಗುೞ್ದು ಪೊಸೆದೊಡೆ**=ರಕ್ಕಸರು ಹಾಲಿನ ಕಡಲನ್ನು ಮತ್ತೊಮ್ಮೆ ಕಡೆದಾಗ; ಇದೊಂದು ಪುರಾಣದಲ್ಲಿ ನಿರೂಪಣೆಗೊಂಡಿರುವ ಕಲ್ಪಿತ ಪ್ರಸಂಗ. ದೇವತೆಗಳು ಮತ್ತು ರಕ್ಕಸರು ಮಂದರ ಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಂಡು ಹಾಲಿನ ಕಡಲನ್ನು ಕಡೆದಾಗ, ಅಮೃತ ಮತ್ತು ನಂಜು ಹುಟ್ಟಿ ಬಂದವು. ಅಮೃತವನ್ನು ದೇವತೆಗಳು ಅಪಹರಿಸಿದರು ಮತ್ತು ನಂಜನ್ನು ಶಿವನು ಕುಡಿದನು. ಅಮೃತದಿಂದ ವಂಚಿತರಾದ ರಕ್ಕಸರು ಮತ್ತೊಮ್ಮೆ ಹಾಲಿನ ಕಡಲನ್ನು ಅಮೃತವನ್ನು ಪಡೆಯುವುದಕ್ಕಾಗಿ ಕಡೆದಾಗ;

ಪೊಸೆದ+ಅಲ್ಲಿ; ಕಾಳಕೂಟ=ಒಂದು ಬಗೆಯ ನಂಜಿನ/ವಿಷದ ಹೆಸರು; ಅಂಕುರ=ಮೊಳಕೆ; ಅಸದಳ=ಅತಿ ಹೆಚ್ಚಾಗಿ/ಅತಿಶಯವಾಗಿ; ಒಗೆದ+ಅಂತೆ; ಒಗೆ=ಹುಟ್ಟು/ಹೊರಹೊಮ್ಮು/ಕಾಣಿಸಿಕೊಳ್ಳು;

**ಪೊಸೆದಲ್ಲಿ ಕಾಳಕೂಟ ಅಂಕುರಮ್ ಅಸದಳಮ್ ಒಗೆದಂತೆ**=ಕಡೆದಾಗ ಕಾಳಕೂಟವೆಂಬ ನಂಜಿನ ಮೊಳಕೆಗಳು ದಟ್ಟವಾಗಿ ಹೊರಹೊಮ್ಮಿದಂತೆ;

ಬಸಿಱಿಂವ್/ಬಸಿರಿವ್=ಹೊಟ್ಟೆಯಿಂದ; ನೂಱ್+ಒಂದು; ಅರುಣ+ಆಕೀರ್ಣಮ್; ಅರುಣ=ಕೆಂಪು ಬಣ್ಣ; ಆಕೀರ್ಣ=ತುಂಬಿದುದು/ಕಿಕ್ಕಿರಿದುದು;

ಪಿಂಡ=ತಾಯಿಯ ಹೊಟ್ಟೆಯಲ್ಲಿ ರೂಪುಗೊಳ್ಳುತ್ತಿರುವ ಮಗುವಿನ ದೇಹ; ಅರುಣಾಕೀರ್ಣ ಪಿಂಡ=ರಕ್ತದಿಂದ ತೊಯ್ದಿರುವ ಪಿಂಡ; ಅಂದು=ಆಗ; ಒಗೆದುವು=ಹೊರಬಿದ್ದವು;

**ಬಸಿಱಿವ್ ನೂಱಿಕೊಂದು ಅರುಣಾಕೀರ್ಣವ್ ಪಿಂಡವ್ ಅಂದು ಒಗೆದುವು**=ತುಂಬು ಬಸರಿಯಾಗಿದ್ದ ಗಾಂಧಾರಿಯ ಹೊಟ್ಟೆಯಿಂದ ರಕ್ತದಿಂದ ನೆನೆದು ಮುದ್ದೆಯಾಗಿರುವ ನೂರೊಂದು ಪಿಂಡಗಳು ಆಗ ಹೊರಬಿದ್ದವು;

ಅವಮ್=ಅವನ್ನು; ಕಿನಿಸಿ=ಹತಾಶೆಯಿಂದ ಕೋಪಗೊಂಡವಳಾಗಿ; ಕಿರ್ಚು+ಎಳ್ದು; ಕಿರ್ಚು=ಬೆಂಕಿ; ಎಳ್ದು=ಎದ್ದು; ಕಿರ್ಚೆಳ್ದು=ಬೆಂಕಿಯು ದಗದಗನೆ ಉರಿಯುತ್ತ; ಇದು ಒಂದು ರೂಪಕವಾಗಿ ಗಾಂಧಾರಿಯ ಮನದಲ್ಲಿ ಉಂಟಾದ ಅತಿಯಾದ ಸಂಕಟವನ್ನು ಸೂಚಿಸುತ್ತಿದೆ;

**ಅವಮ್ ಕಂಡು ಕಿನಿಸಿ ಕಿರ್ಚೆಳ್ದು**=ಆ ನೂರೊಂದು ಪಿಂಡಗಳನ್ನು ನೋಡಿ ಇನ್ನೂ ಹೆಚ್ಚಿನ ಹತಾಶೆಯಿಂದ ಕೆರಳಿ ಕೋಪದಿಂದ ಉರಿಯುತ್ತ;

ಅವು+ಎಲ್ಲವವ್; ಪೊಱಗೆ/ಪೊರಗೆ=ಹೊರಕ್ಕೆ; ಬಿಸುಟು=ಎಸೆದು; ಬನ್ನಿಮ್=ಬನ್ನಿರಿ; ಎಂಬುದುಮ್=ಎಂದು ಹೇಳಲು;

**ಅವೆಲ್ಲವಮ್ ಪೊಱಗೆ ಬಿಸುಟು ಬನ್ನಿಮ್ ಎಂಬುದುಮ್**=ಆ ನೂರೊಂದು ಪಿಂಡಗಳೆಲ್ಲವನ್ನೂ ಹೊರಕ್ಕೆ ಎಸೆದು ಬನ್ನಿರಿ ಎಂದು ದಾಸಿಯರಿಗೆ ಹೇಳಲು;

ಭಟ್ಟಾರಕ=ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಒಲವು ನಲಿವು ಆದರ ಸೂಚಕವಾಗಿ ಸೇರುವ ಪದ; ಬಗ್ಗು=ಗದರಿಸು;

**ವ್ಯಾಸಭಟ್ಟಾರಕನ್ ಬಂದು ಗಾಂಧಾರಿಯನ್ ಬಗ್ಗಿಸಿ**=ಈ ಸಮಯದಲ್ಲಿ ಅಲ್ಲಿಗೆ ಬಂದ ಪೂಜ್ಯರಾದ ವ್ಯಾಸರು ಗಾಂಧಾರಿಯನ್ನು ಗದರಿ;

ಗರ್ಭ+ಒಳ್; ಒಂದೆ ಗರ್ಭದೊಳ್=ಒಮ್ಮೆ ಬಸುರಾಗಿದ್ದಾಗಲೇ; ಸಂತತಿ=ವಂಶ/ಮನೆತನ/ಪೀಳಿಗೆ; ನೂರ್ವರ್=ನೂರು ಮಂದಿ; ಉದಗ್ರ=ವೀರ/ಶೂರ; ಸುತರ್+ಕಳ್; ಸುತ=ಮಗ; ಕಳ್=ಗಳು; ಒದವು=ಉಂಟಾಗು; ಎನೆ=ಎಂದು;

**ಒಂದೆ ಗರ್ಭದೊಳ್ ನಿನ್ನ ಸಂತತಿಗೆ ನೂರ್ವರ್ ಉದಗ್ರ ಸುತರ್ಕಳ್ ಒದವುಗೆ ಎನೆ**=ನೀನು ಒಮ್ಮೆ ಬಸುರಾಗಿದ್ದಾಗಲೇ ವಂಶದ ಬೆಳವಣಿಗೆಗೆ ನೂರು ಮಂದಿ ಶೂರರಾದ ಗಂಡು ಮಕ್ಕಳು ಹುಟ್ಟಿಬರಲೆಂಬ ಉದ್ದೇಶದಿಂದ ನಾನು ವರವನ್ನು ಕರುಣಿಸಿದ್ದರೆ;

ಕೆಮ್ಮನೆ=ಸುಮ್ಮನೆ/ಅನಗತ್ಯವಾಗಿ; ಇಂತು=ಈ ರೀತಿ; ಪೊಸೆದು=ಹೊಸೆದು/ಹಿಸುಕಿ; ಇಕ್ಕಿದೆ=ಹಾಕಿದೆ;

**ಕೆಮ್ಮನೆ ಇಂತು ಪೊಸೆದು ಇಕ್ಕಿದೆ**=ಅನಗತ್ಯವಾಗಿ ಈ ರೀತಿ ಹೊಸಕಿ ಹಾಕಿದೆ;

ಪೊಲ್ಲದು=ಕೆಟ್ಟದ್ದು/ಹೀನವಾದುದು/ಅನುಚಿತವಾದುದು; ಗೆಯ್=ಮಾಡು;

**ಪೊಲ್ಲದು ಗೆಯ್ದೆ ಎಂದು**=ಮಾಡಬಾರದಂತಹ ಕೆಟ್ಟ ಕೆಲಸವನ್ನು ಮಾಡಿದೆ ಎಂದು ಹೇಳಿ;

ಮಾಣ್=ಸುಮ್ಮನಿರು; ಸೃಷ್ಟಿ=ಜಗತ್ತು; ಚೋದ್ಯ=ಅಚ್ಚರಿ/ಸೋಜಿಗ; ಅಪ್ಪಿನಮ್=ಆಗುವಂತೆ;

**ಮುನಿ ಮಾಣದೆ ಸೃಷ್ಟಿಗೆ ಚೋದ್ಯಮ್ ಅಪ್ಪಿನಮ್**=ಗಾಂಧಾರಿಯು ಮಾಡಿದ್ದನ್ನು ವ್ಯಾಸಮುನಿಯು ನೋಡಿಕೊಂಡು ಸುಮ್ಮನಾಗದೆ ಜಗತ್ತಿಗೆ ಸೋಜಿಗವುಂಟಾಗುವಂತಹ ರೀತಿಯಲ್ಲಿ;

ಆಗಳೆ=ಆ ಗಳಿಗೆಯಲ್ಲಿಯೇ; ಪಿಂಡಮುಮ್+ಅನ್; ತೀವು=ತುಂಬು; ಕಮ್ಮನೆ+ಅಪ್ಪ; ಕಮ್ಮನೆ=ಸುವಾಸನೆ/ಕಂಪು; ಅಪ್ಪ=ಆಗಿರುವ/ಆದ; ಕೊಡ+ಒಳ್; ಕೊಡ=ಮಣ್ಣಿನ ಮಡಕೆ; ತುಪ್ಪದ ಕೊಡ=ತುಪ್ಪದಿಂದ ತುಂಬಿರುವ ಮಣ್ಣಿನ ಮಡಕೆ; ಒಳ್=ಅಲ್ಲಿ; ಸಮಂತು=ಅಚ್ಚುಕಟ್ಟು/ಓರಣ/ಒಪ್ಪವಾಗಿ; ಮಡಗು=ಇಡು/ಇರಿಸು; ಇಟ್ಟೊಡೆ=ಇಡಲು;

**ಆಗಳೆ ನೂಱು ಪಿಂಡಮುಮನ್ ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡಗಿ ಇಟ್ಟೊಡೆ**=ಆ ಗಳಿಗೆಯಲ್ಲಿಯೇ ನೆಲದ ಮೇಲೆ ಚೆಲ್ಲಾಡಿದ್ದ ನೂರು ಪಿಂಡಗಳನ್ನು ಗಮಗಮಿಸುತ್ತಿರುವ ತುಪ್ಪದಿಂದ ತುಂಬಿರುವ ನೂರು ಮಡಕೆಗಳಲ್ಲಿ ಒಪ್ಪವಾಗಿ ಇಡಿಸಲು;

ಅಂತು=ಆ ರೀತಿ ಇರಿಸಿದ ಮಡಕೆಗಳಲ್ಲಿ; ನೂರ್ವರ್+ಒಳ್; ನೂರ್ವರೊಳ್=ನೂರು ಪಿಂಡಗಳಲ್ಲಿ; ಒರ್ವನ=ಒಬ್ಬನ; ಅಗುರ್ಬು=ವಿಸ್ಮಯ/ಬೆರಗು; ಪರ್ಬು=ಹಿಗ್ಗು/ಉಬ್ಬು; ಪರಿಕಲಿಸು=ಹರಡು/ಮೀರಿ;

**ಅಂತು ನೂರ್ವರೊಳ್ ಒರ್ವನ ಅಗುರ್ಬು ಪರ್ಬಿ ಪರಕಲಿಸೆ**=ಆ ರೀತಿ ಇಟ್ಟಿರುವ ನೂರು ಮಡಕೆಗಳಲ್ಲಿನ ಪಿಂಡಗಳಲ್ಲಿ ಒಂದು ಪಿಂಡವು ಬೆರಗು ಮೂಡಿಸುವಂತೆ ದೊಡ್ಡದಾಗಿ ಉಬ್ಬಿ ಮೀರಿ ಬೆಳೆಯಲು;

ಸಂಪೂರ್ಣ=ತುಂಬಿದ/ಪೂರ್ತಿಯಾಗಿ; ವಯಸ್ಕನ್+ಆಗಿ; ವಯಸ್ಕನ್=ಚೆನ್ನಾಗಿ ಬೆಳೆದವನು; ಘೃತ+ಘಟ+ವಿಘಟನ್+ಉಮ್+ಆಗೆ; ಘೃತ=ತುಪ್ಪ; ಘಟ=ಮಣ್ಣಿನ

ಮಡಕೆ; ವಿಘಟನ=ಒಡೆಯುವುದು; ಉವ್=ಊ; ಪುಟ್ಟುವುದು+ಉವ್; ಪುಟ್ಟು=ಹುಟ್ಟು/ಜನಿಸು;

**ಸಂಪೂರ್ಣ ವಯಸ್ಕನಾಗಿ ಘೃತಘಟವಿಘಟನುಮಾಗೆ ಪುಟ್ಟುವುದುಮ್**= ಪಿಂಡರೂಪದಲ್ಲಿದ್ದ ಮಗು ಈಗ ಚೆನ್ನಾಗಿ ಬೆಳೆದು ತುಪ್ಪದ ಮಡಕೆಯನ್ನು ಒಡೆದುಕೊಂಡು ಹುಟ್ಟಿಬರಲು;

ಪ್ರತಿಮೆ=ವಿಗ್ರಹ; ಅಟ್ಟುವು=ಅಳತೊಡಗಿದವು;

**ಪ್ರತಿಮೆಗಳ್ ಅಟ್ಟುವು**=ಹಸ್ತಿನಾವತಿಯಲ್ಲಿದ್ದ ವಿಗ್ರಹಗಳು ಅಳತೊಡಗಿದವು. ಇದು ಮತ್ತು ಇನ್ನು ಮುಂದೆ ಬರುವ ಕೆಲವು ಸಂಗತಿಗಳೆಲ್ಲವೂ ರೂಪಕಗಳಾಗಿ ಚಿತ್ರಣಗೊಂಡಿವೆ. ಜಡರೂಪಿಯಾದ ಪ್ರತಿಮೆಯು ಅಳುವುದಕ್ಕೆ ಸಾಧ್ಯವಿಲ್ಲ. ಆದರೆ ಅಂತಹ ಜಡರೂಪಿಯ ಕಣ್ಣಿನಲ್ಲೂ ನೀರು ಬರುತ್ತಿದೆ ಎಂಬ ಕಲ್ಪಿತ ಸಂಗತಿಯ ಮೂಲಕ ಈ ಮಗುವಿನಿಂದ ಮುಂಬರಲಿರುವ ಕಾಲದಲ್ಲಿ ಮಾನವ ಸಮುದಾಯದ ಜೀವನದಲ್ಲಿ ದುರಂತ ಉಂಟಾಗುತ್ತದೆ ಎಂಬುದನ್ನು ಸೂಚಿಸಲಾಗಿದೆ;

ಧಾತ್ರಿ=ಭೂಮಂಡಲ; ಅತಿ=ಬಹಳ/ಹೆಚ್ಚಿನ; ರಭಸ=ವೇಗ/ಜೋರು; ಮೊಟಗು=ಅಬ್ಬರಿಸು/ಗಟ್ಟಿಯಾಗಿ ದನಿ ಮಾಡು;

**ಧಾತ್ರಿ ಅತಿ ರಭಸದೆ ಮೊಟಗಿದುದು**=ಭೂಮಂಡಲ ಜೋರಾಗಿ ಕಂಪಿಸ ತೊಡಗಿದ್ದರಿಂದ ದೊಡ್ಡ ದನಿಯು ಕೇಳತೊಡಗಿತು;

ದೆಸೆ=ದಿಕ್ಕು; ಉರಿ=ಬೆಂಕಿಯ ನಾಲಗೆ;

**ದೆಸೆಗಳ್ ಉರಿದುವು**=ಎಂಟು ದಿಕ್ಕುಗಳ ಕೊನೆಯಲ್ಲಿ ಬೆಂಕಿಯ ಕೆನ್ನಾಲಿಗೆಯು ಚಾಚಿ ಉರಿಯತೊಡಗಿತು;

ಭೂತ=ಪಿಶಾಚಿ/ದೆವ್ವ; ಪ್ರತತಿ=ಗುಂಪು; ಆಡು=ಕುಣಿ;

**ಭೂತ ಪ್ರತತಿಗಳ್ ಆಡಿದುವು**=ದೆವ್ವಗಳು ಕುಣಿಯತೊಡಗಿದವು;

ಅತಿ=ಬಹಳ; ರಮ್ಯಸ್ಥಾನ+ಒಳ್; ರಮ್ಯ=ಸುಂದರ/ಮನೋಹರ; ಸ್ಥಾನ=ಜಾಗ/ ಎಡೆ; ಒಳ್=ಅಲ್ಲಿ; ಶಿವಾ=ನರಿ; ನಿವಹಮ್+ಗಳ್; ನಿವಹ=ಗುಂಪು; ಒಳಱು/ ಒಳರು=ಅರಚು/ಕೂಗು;

**ಶಿವಾ ನಿವಹಂಗಳ್ ಅತಿ ರಮ್ಯಸ್ಥಾನದೊಳ್ ಒಳಱಿದುವು**=ನರಿಗಳು ಬಹಳ ಸುಂದರವಾದ ಜಾಗಗಳಲ್ಲಿ ಅಂದರೆ ಜನವಸತಿಯಿರುವ ಎಡೆಗಳಲ್ಲಿ ಊಳಿಡ ತೊಡಗಿದವು;

ಅಂತು=ಹಾಗೆ/ಆ ರೀತಿಯಲ್ಲಿ; ಒಗೆದ=ಕಾಣಿಸಿಕೊಂಡ/ಕಂಡುಬಂದ; ಉತ್ಪಾತಮ್+ಗಳ್+ಅಮ್; ಉತ್ಪಾತ=ನಿಸರ್ಗದಲ್ಲಿ ಕಂಡು ಬರುವ ಕೆಲವು ಬಗೆಯ ಕ್ರಿಯೆಗಳನ್ನು ಮತ್ತು ನೋಟಗಳನ್ನು ಕೇಡಿನ ಸಂಕೇತಗಳೆಂದು ಜನಸಮುದಾಯ ನಂಬಿದೆ. ಪ್ರತಿಮೆಗಳು ಅಳತೊಡಗಿದ್ದು, ಭೂಮಿ ದೊಡ್ಡ ದನಿಯಲ್ಲಿ ಕಂಪಿಸಿದ್ದು, ದಿಕ್ಕುಗಳಲ್ಲಿ ಕೆನ್ನಾಲಿಗೆ ಬೆಂಕಿ ಕಾಣಿಸಿಕೊಂಡಿದ್ದು, ದೆವ್ವಗಳ ಕುಣಿದಿದ್ದು, ನರಿಗಳು ಊಳಿಟ್ಟ ಕ್ರಿಯೆಗಳೆಲ್ಲವೂ ಕೇಡಿನ ಸೂಚಕಗಳಾಗಿ ಕಾಣಿಸಿಕೊಂಡಿವೆ;

**ಅಂತು ಒಗೆದ ಅನೇಕ ಉತ್ಪಾತಂಗಳಮ್ ಕಂಡು**=ಆ ರೀತಿಕಾಣಿಸಿಕೊಂಡ ಬಗೆ ಬಗೆಯ ಉತ್ಪಾತಗಳನ್ನು ನೋಡಿ;

ಮುನ್+ಅಱಿವ; ಮುನ್=ಮೊದಲು; ಅಱಿ=ತಿಳಿ; ಮುಂದಱಿವ= ಮುಂದಾಗುವುದನ್ನು ಮೊದಲೇ ಗ್ರಹಿಸಿಕೊಳ್ಳುವ; ಚದುರ=ಜಾಣ; ಇಂತು=ಈ ರೀತಿ;

**ಮುಂದಱಿವ ಚದುರ ವಿದುರನ್**=ಮುಂದೆ ಏನು ಆಗಬಹುದೆಂಬುದನ್ನು ಆಲೋಚನೆ ಮಾಡಿ ತಿಳಿದುಕೊಳ್ಳುವಂತಹ ಜಾಣತನವುಳ್ಳ ವಿದುರನು;

**ಇಂತು ಎಂದನ್**=ಈ ರೀತಿ ಹೇಳಿದನು;

ಆನ್=ನಾನು; ಅಱಿವೆನ್/ಅರಿವೆನ್=ತಿಳಿದಿರುವೆನು; ದಲ್=ನಿಜವಾಗಿಯೂ/ ಯಾವುದೇ ಅನುಮಾನವಿಲ್ಲದೆ; ಈತನೆ=ಇವನೇ; ಕುಲ=ವಂಶ/ಮನೆತನ; ಕೇತು=ಆಕಾಶದಲ್ಲಿ ಕೆಲವೊಮ್ಮೆ ಕಂಡುಬರುವ ಬೆಳಕಿನ ರಾಶಿ; ಇದನ್ನು ನೋಡಿದವರ ಜೀವನದಲ್ಲಿ ಕೆಡುಕು ಉಂಟಾಗುತ್ತದೆ ಎಂಬ ನಂಬಿಕೆಯು ಜನಮನದಲ್ಲಿದೆ.

**ಆನ್ ಅಱಿವೆನ್**=ನಾನು ಈ ಉತ್ಪಾತಗಳು ಏನನ್ನು ಸೂಚಿಸುತ್ತಿವೆ ಎಂಬುದನ್ನು ತಿಳಿದಿರುವೆನು;

**ದಲ್, ಈತನೆ ನಮ್ಮ ಕುಲಕ್ಕಮ್ ಕೇತು**=ನಿಜವಾಗಿಯೂ ಈತನಿಂದ ನಮ್ಮ ಕುಲಕ್ಕೆ ಕೇಡಾಗುತ್ತದೆ;

ಅಲ್ಲದಂದು=ಹಾಗಲ್ಲದಿದ್ದರೆ; ಏಕೆ=ಯಾತಕ್ಕಾಗಿ; ಇನಿತು=ಈ ಪ್ರಮಾಣದಲ್ಲಿ; ತೋರ್=ಕಾಣು; ತೋರ್ಪುವು=ಕಂಡುಬಂದವು;

**ಅಲ್ಲದಂದು ಏಕೆ ಇನಿತು ಉತ್ಪಾತಮ್ ತೋರ್ಪುವು**=ಹಾಗಲ್ಲದಿದ್ದರೆ ಯಾತಕ್ಕಾಗಿ ಬಹುಬಗೆಗಳಲ್ಲಿ ಕೆಡುಕಿನ ಸೂಚನೆಗಳು ಕಾಣಿಸಿಕೊಳ್ಳುತ್ತಿದ್ದವು;

ಈತನ=ಇವನನ್ನು; ಪೆಱಗೆ=ಹೊರಕ್ಕೆ; ಬಿಸುಡು=ಎಸೆ/ತೂರೆ/ಬಿಡು;

**ಈತನ ಪೆಱಗೆ ಬಿಸುಡುವುದು**=ಈತನನ್ನು ಹೊರಕ್ಕೆ ಎಸೆಯುವುದು ಎಂದು ಹೇಳಿದರೂ

ಉಟಿ=ಹೊರತಾಗು/ಮಿಗು; ಸುತ=ಮಗ; ಅಪ್ಪರ್=ಆಗುವರು; ಎಂದೊಡಮ್=ಎಂದು ಹೇಳಿದರೂ

**ಉಟಿದ ಸುತರೆ ಸಂತತಿಗೆ ಅಪ್ಪರ್ ಎಂದೊಡಮ್**=ಇನ್ನುಳಿದ ಗಂಡು ಮಕ್ಕಳೇ ನಮ್ಮ ಕುಲ ಉಳಿದು ಬೆಳೆದು ಬಾಳುವುದಕ್ಕೆ ಸಾಕಾಗುತ್ತಾರೆ ಎಂದು ಹೇಳಿದರೂ;

ಪುತ್ರ=ಮಗ; ಮೋಹ=ಅಕ್ಕರೆ/ಹೆಚ್ಚಿನ ಒಲವು ; ಕಾರಣಮ್+ಆಗಿ;

**ಪುತ್ರಮೋಹ ಕಾರಣಮಾಗಿ**=ಮಗನ ಮೇಲಣ ಮೋಹದಿಂದಾಗಿ;

ಏನ್+ಗೆಯ್ದುವಮ್; ಏನ್=ಯಾವುದು; ಗೆಯ್ದುವಮ್=ಮಾಡಿದರೂ; ಒಡಂಬಡು=ಒಪ್ಪು/ಸಮ್ಮತಿಸು; ಇರ್ದೊಡೆ=ಇದ್ದರೆ;

**ಧೃತರಾಷ್ಟ್ರನುಮ್ ಗಾಂಧಾರಿಯುಮ್ ಏಗೆಯ್ದುಮ್ ಒಡಂಬಡದೆ ಇರ್ದೊಡೆ**= ವಿದುರನು ಯಾವ ರೀತಿಯಲ್ಲಿ ಹೇಳಿದರೂ ತಂದೆಯಾದ ಧೃತರಾಷ್ಟ್ರನೂ ತಾಯಿಯಾದ ಗಾಂಧಾರಿಯೂ ಮಗನನ್ನು ತೊರೆಯಲು ಒಪ್ಪದಿದ್ದಾಗ;

ಮಹಾ=ಹಿರಿಯ; ಬ್ರಾಹ್ಮಣರ್+ಇಂದಮ್;

**ಮಹಾ ಬ್ರಾಹ್ಮಣರಿಂದಮ್**=ಹಿರಿಯರಾದ ಬ್ರಾಹ್ಮಣರಿಂದ;

ಶಾಂತಿಕ=ವ್ಯಕ್ತಿಗೆ ಜೀವನದಲ್ಲಿ ಕೇಡು ತಟ್ಟದಿರಲೆಂದು ಮತ್ತು ಒಳ್ಳೆಯದಾಗಲೆಂದು ಬ್ರಾಹ್ಮಣರಿಂದ ಮಾಡಿಸುವ ಜಪ ತಪ ಹೋಮ ಮುಂತಾದ ಆಚರಣೆಗಳು; ಪೌಷ್ಟಿಕ=ದೇವತೆಗಳನ್ನು ಒಲಿಸಿಕೊಂಡು ತನಗೆ ಒಡವೆ ವಸ್ತುಗಳನ್ನು ಪಡೆದು ಒಲವು ನಲಿವು ನೆಮ್ಮದಿಯಿಂದ ಬಾಳಲೆಂದು ವ್ಯಕ್ತಿಯು ಬ್ರಾಹ್ಮಣರ ಮೂಲಕ ಮಾಡಿಸುವ ಆಚರಣೆಗಳು; ಕ್ರಿಯೆಗಳ್+ಅಮ್; ಕ್ರಿಯೆ=ಪೂಜೆಯ ಆಚರಣೆ; ಬಳೆ=ನೆರವೇರು/ನಡೆ; ಬಳೆಯಿಸಿ=ನೆರವೇರಿಸಿ;

**ಉತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಮ್ ಬಳೆಯಿಸಿ**=ಜೀವನದಲ್ಲಿ ಮುಂದೆ ಬರಲಿರುವ ಕೇಡನ್ನು ತಡೆಗಟ್ಟಿ ಕುಲದ ಎಲ್ಲರಿಗೂ ಒಳ್ಳೆಯದಾಗಲೆಂದು ಬಹುಬಗೆಯ ಆಚರಣೆಗಳನ್ನು ಮಾಡಿ;

ಬದ್ದವಣಮ್+ಅಮ್; ಬದ್ದವಣ=ಒಂದು ಬಗೆಯ ವಾದ್ಯ ; ಬಾಜಿಸು= ನುಡಿಸುವುದು/ವಾದ್ಯಗಳಿಂದ ದನಿಯು ಹೊರಹೊಮ್ಮುವಂತೆ ಮಾಡುವುದು; ಮಂಗಳಮ್+ಅಮ್; ಮಂಗಳ=ಒಳ್ಳೆಯದು/ಏಳಿಗೆ/ಶ್ರೇಯಸ್ಸು; ಪಾಡು=ಹಾಡು; ಪಾಡಿಸಿ=ಹಾಡಿಸಿ;

**ಬದ್ದವಣಮಮ್ ಬಾಜಿಸಿ ಮಂಗಳಮಮ್ ಪಾಡಿಸಿ**=ಬದ್ದವಣವೆಂಬ ವಾದ್ಯವನ್ನು ನುಡಿಸಿ, ಮಂಗಳಕರವಾದ ಗೀತೆಗಳನ್ನು ಹಾಡಿಸಿ;

ಕೂಸು=ಮಗು; ದುರ್ಯೋಧನನ್+ಎಂದು; ಪೆಸರ್+ಅನ್;

**ಕೂಸಿಂಗೆ ದುರ್ಯೋಧನನೆಂದು ಪೆಸರನ್ ಇಟ್ಟು**=ಹುಟ್ಟಿದಾಗ ಅಪಶಕುನಗಳಾಗಿದ್ದ ಕೂಸಿಗೆ ದುರ್ಯೋಧನ ಎಂಬ ಹೆಸರನ್ನು ಇಟ್ಟು;

ಮತ್ತಿನ=ಇನ್ನುಳಿದ; ಕೂಸುಗಳ್ಗೆ+ಎಲ್ಲಮ್;

**ಮತ್ತಿನ ಕೂಸುಗಳ್ಗೆಲ್ಲಮ್**=ಇನ್ನುಳಿದ ಮಕ್ಕಳೆಲ್ಲರಿಗೂ;

ಆದಿ+ಆಗಿ;ಆದಿ=ಮೊದಲು; ನಾಮಂಗಳ್+ಅನ್; ನಾಮ=ಹೆಸರು; **ದುಶ್ಯಾಸನ ಆದಿಯಾಗಿ ನಾಮಂಗಳನ್ ಇಟ್ಟು**=ದುಶ್ಯಾಸನ ಎಂಬ ಹೆಸರಿನಿಂದ ಮೊದಲಗೊಂಡು ಅನೇಕ ಬಗೆಯ ಹೆಸರುಗಳನ್ನು ಇಟ್ಟು;

ಪರಕೆ+ಅಮ್; ಪರಕೆ=ಹರಕೆ/ಜೀವನದಲ್ಲಿ ಒಳಿತಾಗಲೆಂದು ದೇವರಿಗೆ ಸಲ್ಲಿಸುವ ಕಾಣಿಕೆ; ಸುಕ=ಜೀವನದಲ್ಲಿ ಒಲವು ನಲಿವು ನೆಮ್ಮದಿಯಿಂದ ಇರುವುದು; ಇರ್ಪ+ಅನ್ನೆಗಮ್; ಇರ್ಪ=ಇರುವ; ಅನ್ನೆಗಮ್=ತನಕ/ವರೆಗೆ;

**ಪರಕೆಯಮ್ ಕೊಟ್ಟು ಸುಕಮ್ ಇರ್ಪನೆಗಮ್**=ದೇವತೆಗಳಿಗೆ ಹರಕೆಯನ್ನು ಸಲ್ಲಿಸಿ ಧೃತರಾಷ್ಟ್ರ ಗಾಂಧಾರಿಯ ರಾಜಕುಟುಂಬವು ಒಲವು ನಲಿವು ನೆಮ್ಮದಿಯಿಂದ ಇರಲು...

✦

## ಗಾಂಧಾರಿಯ ಆತಂಕ

## ಪಂಪ ಭಾರತ ಪಠ್ಯ–ಪ್ರಥಮಾಶ್ವಾಸ

ವ॥ ಅಂತು ಭರತಕುಲತಿಲಕರಪ್ಪಿರ್ವರ್ಮಕ್ಕಳಂ ಪೆತ್ತು ಕೊಂತಿ ಸಂತಸದಂತಮನೆಯ್ದಿರ್ಪುದುಮತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ–

**ಕಂ॥ ಸಂತತಿಗೆ ಪಿರಿಯ ಮಕ್ಕಳ**
**ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ**
**ಕೊಂತಿಯೆ ಪಡೆದಳ್ ಗರ್ಭದ**
**ಚಿಂತೆಯದಿನ್ನೇವುದೆಂದು ಬಸಿಱಿಂ ಪೊಸೆದಳ್. ॥129॥**

**ಪೊಸೆದೊಡೆ ಪಾಲ್ಗಡಲಂ ಮಗು**
**ೞ್ದಸುರರ್ ಪೊಸೆದಲ್ಲಿ ಕಾಳಕೂಟಾಂಕುರಮಂ**
**ದಸದಳಮೊಗೆದಂತೊಗೆದುವು**
**ಬಸಿಱಿಂ ನೂಱಿಕೊಂದು ಪಿಂಡಮರುಣಾಕೀರ್ಣಂ. ॥130॥**

ವ॥ ಅವಂ ಕಂಡು ಕಿನಿಸಿ ಕಿರ್ಚಿಟ್ಟಿವೆಲ್ಲವಂ ಪೊಱಗೆ ಬಿಸುಟು ಬನ್ನಿಮೆಂಬುದುಂ ವ್ಯಾಸಭಟ್ಟಾರಕಂ ಬಂದು ಗಾಂಧಾರಿಯಂ ಬಗ್ಗಿಸಿ–

**ಚಂ॥ ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರ ಸುತರ್ಕಳೊಂದೆ ಗ**
**ರ್ಭದೊಳಿನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯೆಂದು ಮಾ**
**ಣದೆ ಮುನಿ ನೂಱುಪಿಂಡಮುಮನಾಗಳೆ ತೀವಿದ ಕಮ್ಮನಪ್ಪ ತು**
**ಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ ಸೃಷ್ಟಿಗೆ ಚೋದ್ಯಮಪ್ಪಿನಂ. ॥131॥**

ವ॥ ಅಂತು ನೂರ್ವರೊಳೊರ್ವನಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣ ವಯಸ್ಕನಾಗಿ ಘೃತಘಟವಿಘಟನುಮಾಗೆ ಪುಟ್ಟುವುದುಂ–

**ಕಂ॥ ಪ್ರತಿಮೆಗಳಟ್ಟುವು ಮೊಟಗಿದು**
**ದತಿ ರಭಸದೆ ಧಾತ್ರಿ ದೆಸೆಗಳುರಿದುವು ಭೂತ**
**ಪ್ರತತಿಗಳಾಡಿದುವೊಳಱಿದು**
**ವತಿ ರಮ್ಯಸ್ಥಾನದೊಳ್ ಶಿವಾ ನಿವಹಂಗಳ್. ॥132॥**

ವ॥ ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರ ವಿದುರನಿಂತೆಂದಂ–

**ಕಂ॥ ಈತನೆ ನಮ್ಮ ಕುಲಕ್ಕಂ**
**ಕೇತು ದಲಾನಱಿವೆನಲ್ಲದಂದೇಕಿನಿತು**
**ತ್ಪಾತಂ ತೋರ್ಪುವು ಬಿಸುಡುವು**
**ದೀತನ ಪೆಱಗುಟಿದ ಸುತರೆ ಸಂತತಿಗಪ್ಪರ್. ॥133॥**

ವ॥ ಎಂದೊಡಂ ಪುತ್ರಮೋಹ ಕಾರಣಮಾಗಿ ಧೃತರಾಷ್ಟ್ರನುಂ ಗಾಂಧಾರಿಯುಮೇಗೆಯ್ದುಮೊಡಂಬಡದಿರ್ದೊಡುತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಂ ಮಹಾ ಬ್ರಾಹ್ಮಣರಿಂದಂ ಬಳೆಯಿಸಿ ಬದ್ದವಣಮಂ ಬಾಜಿಸಿ ಮಂಗಳಮಂ ಪಾಡಿಸಿ ಕೂಸಿಂಗೆ ದುರ್ಯೋಧನನೆಂದು ಪೆಸರನಿಟ್ಟು ಮತ್ತಿನ ಕೂಸುಗಳ್ಗೆಲ್ಲಂ ದುಶ್ಶಾಸನಾದಿಯಾಗಿ ನಾಮಂಗಳನಿಟ್ಟು ಪರಕೆಯಂ ಕೊಟ್ಟು ಸುಕಮಿರ್ಪನ್ನೆಗಮ್...

✦

# ಬರಹಗಾರ

ಹೆಸರು : ಸಿ.ಪಿ.ನಾಗರಾಜ (1945)

ತಾಯಿ : ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

ತಂದೆ : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

ಓದು : ಎಂ.ಎ., ಪಿಎಚ್.ಡಿ.,

ಕೆಲಸ : ಕನ್ನಡ ಅಧ್ಯಾಪಕ
1971–72 ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ
1972–2003 ಭಾರತಿ ಕಾಲೇಜು, ಕಾಳಮುದ್ದನ ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.
2006– ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

ಬರಹ :

ನಾಟಕ : ಭಾಗೀರತಿ
ಅಂಬೆ
ಹಾವು
ಅಂಗಿಬಟ್ಟೆ
ಒಂದು ರೂಪಾಯಿ
ಕಳ್ಳರಿದ್ದಾರೆ ಎಚ್ಚರಿಕೆ
ಹೆಣದ ಹಣ.

ಗದ್ಯ : ಹಳ್ಳಿಗಾಡಿನ ರೂವಾರಿ,
ಡಾ. ಬಂದೀಗೌಡ
ಆಣೆ ಪ್ರಮಾಣಗಳು
ಬಯ್ಗುಳ
ಸರ್ವಜ್ಞ ವಚನಗಳ ಓದು
ಅಲ್ಲಮ ವಚನಗಳ ಓದು
ಬಸವಣ್ಣ ವಚನಗಳ ಓದು
ಮುದ್ದೆ ಗಂಟು
ಶಿವಶರಣ ಶರಣೆಯರ ವಚನಗಳ ಓದು
ಪಂಪ ಭಾರತ ಓದು

ವಿಳಾಸ : ಸಿ.ಪಿ.ನಾಗರಾಜ, 75, 'ಎ' ಬ್ಲಾಕ್, 5ನೆಯ ಕ್ರಾಸ್,
ಕ್ರಿಶ್ಣ ಗಾರ್ಡನ್, ಆರ್.ವಿ.ಕಾಲೇಜು ಪೋಸ್ಟ್,
ಬೆಂಗಳೂರು–560 059.
ಮೊ: 9986347521.
e-mail : ngy7777@gmail.com



- ಮತ್ಸ್ಯಗಂಧಿ ಪ್ರಸಂಗ
- ಅಂಬೆ ಪ್ರಸಂಗ
- ಧೃತರಾಷ್ಟ್ರ-ಪಾಂಡು ವಿದುರ ಜನನ
- ಕರ್ಣನ ಜನನ
- ಕರ್ಣನ ಬೆಳವಣಿಗೆ
- ಶಾಪಕ್ಕೆ ಗುರಿಯಾದ ಪಾಂಡು ರಾಜ
- ಕುಂತಿಯ ಬಯಕೆ
- ಗಾಂಧಾರಿಯ ಆತಂಕ

ನಾಗು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ. 140/-

